# ಕನ್ನಡ ಮಾಳವಿಕಾಗ್ನಿಮಿತ್ರ

ಎಸ್. ವಿ. ಪರಮೇಶ್ವರಭಟ್ಟ

ಶಾರದಾ ಮಂದಿರ
ರಾಮಯ್ಯರ್ ರಸ್ತೆ ಮೈಸೂರು

ಕನ್ನಡ ಕವಿ ಕಾವ್ಯ ಮಾಲೆ—೪೫

# ಕನ್ನಡ ಮಾಳವಿಕಾಗ್ನಿಮಿತ್ರ

ಎಸ್. ವಿ. ಪರಮೇಶ್ವರಭಟ್ಟ, ಎಂ. ಎ.

ಪ್ರಕಾಶಕರು

ಶಾರದಾ ಮಂದಿರ

ರಾಮಯ್ಯರ್ ರಸ್ತೆ ; ಮೈಸೂರು

ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು
ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.
ಪ್ರೊಫೆಸರ್ ಮತ್ತು ಕನ್ನಡ ಇಲಾಖೆಯ ಮುಖ್ಯಾಧಿಕಾರಿಗಳು
ಶಾರದಾ ವಿಲಾಸ ಕಾಲೇಜು, ಮೈಸೂರು.

ಎಲ್ಲ ಹಕ್ಕುಗಳು ಲೇಖಕರವು

ಬೆಲೆ
ಸಾಧಾರಣ ಪ್ರತಿ ೧-೭೫   ಉತ್ತಮ ಪ್ರತಿ ೩-೫೦

ಮುದ್ರಕರು :
ಜಿ. ಹೆಚ್. ರಾಮರಾವ್,
ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,
ಮೈಸೂರು.

# ಪ್ರಸ್ತಾವನೆ

## ಕಾಳಿದಾಸ

(ಕ್ರಿ. ಶ. ಸುಮಾರು ೪೦೦)

ಭಾಸನ ಕಾಲ ದೇಶ ಜೀವಿತಾದಿಗಳು ಎಷ್ಟು ಅನಿಶ್ಚಿತವಾಗಿವೆಯೋ ಕಾಳಿದಾಸನ ಕಾಲ ದೇಶ ಜೀವಿತಾದಿಗಳೂ ಅಷ್ಟೇ ಅನಿಶ್ಚಿತವಾಗಿವೆ. ಈ ವಿಚಾರದಲ್ಲಿ ಇದುವರೆಗೆ ನಡೆದಿರುವ ಸಂಶೋಧನ ವಾದ ವಿವಾದಗಳಿಗೇನೂ ಕಡಿಮೆಯಿಲ್ಲ; ಪ್ರಾಯಶಃ ಮತ್ತಾವ ಸಂಸ್ಕೃತ ಕವಿಯ ಕಾಲದ ವಿಚಾರ ವಾಗಿಯೂ ಇಷ್ಟು ಚರ್ಚಾಸಾಹಿತ್ಯವು ಹುಟ್ಟಿರಲಾರದು; ಆದರೆ ಪ್ರಯ ತ್ನಕ್ಕೆ ತಕ್ಕ ಫಲವಾಗಿಲ್ಲ; ಪರಿಣಾಮದಲ್ಲಿ, ಭಾಸನ ಕಾಲ ವಿಚಾರದಂತೆಯೇ ಮುಖ್ಯವಾಗಿ ಎರಡು ಮತಗಳು ಏರ್ಪಟ್ಟಿವೆ. ಒಂದು, ಕೆಲವು ಭಾರತೀಯ ವಿದ್ವಾಂಸರ ಮತ—ಕಾಳಿದಾಸನು ಕ್ರಿ.ಪೂ. ೧೫೦ ರಲ್ಲಿ ಜೀವಿಸಿದ್ದನೆಂದು. ಇನ್ನೊಂದು, ಹಲವು ಪಾಶ್ಚಾತ್ಯ ವಿದ್ವಾಂಸರ ಮತ—ಅವನು ಸುಮಾರು ಕ್ರಿ.ಶ. ೪೦೦ ರಲ್ಲಿ ಜೀವಿಸಿದ್ದನೆಂದು. ಮಿಕ್ಕ ಮತಗಳು ಇನ್ನೂ ಹಲವು ಇವೆ; ಅವುಗಳಲ್ಲಿ ಕೆಲವು ನಿರಾಧಾರವೆಂದು ಈಚೆಗೆ ಬಹುಮತದಿಂದ ಅಂಗೀಕರಿಸಲ್ಪಟ್ಟಿವೆ. ಆದ್ದರಿಂದ ಅಂಥವುಗಳನ್ನು ಪ್ರಸ್ತಾಪಿಸದೆ, ಮೇಲೆ ಕಂಡ, ಎರಡು ಪ್ರಧಾನ ಮತಗಳು ಹೇಗೆ ಸಿದ್ಧಾಂತಿಸಲ್ಪಟ್ಟಿವೆ ಎಂಬು ದನ್ನು ಮಾತ್ರ ಇಲ್ಲಿ ಸೂಚಿಸಿದೆ.

ಕಾಳಿದಾಸನ ವಿಚಾರವಾಗಿ ಜನಜನಿತವಾದ ಹಲವು ಕಥೆಗಳಿವೆ; ಅವನು ಕುರುಬನಾಗಿದ್ದು ಕಾಳಿಯ ವರದಿಂದ ಕವಿಯಾದನೆಂಬುದು ಒಂದು; ಧಾರಾನಗರದ ಭೋಜರಾಜನ ಆಸ್ಥಾನದಲ್ಲಿದ್ದು ಸಮಸ್ಯಾಪೂರಣ ಮಾಡು ತ್ತಿದ್ದನೆಂಬುದು ಒಂದು; ಕುಮಾರದಾಸನ ಕಾಲದಲ್ಲಿ ಸಿಲೋನ್ ದ್ವೀಪಕ್ಕೆ ಹೋಗಿದ್ದು ಅಲ್ಲಿ ಒಬ್ಬ ವೇಶ್ಯೆಯಿಂದ ಹತನಾದನೆಂಬುದು ಒಂದು. ಇಂಥವು ಬರಿಯ ಕಥೆಗಳು. ಇವುಗಳಿಂದ ಈ ಕಥಾಪ್ರಚಾರಕರ ಸರಳತೆ ಕೌತುಕ ಅವಿಮರ್ಶ ಬುದ್ಧಿಗಳು ವ್ಯಕ್ತವಾಗುತ್ತವೆಯೇ ವಿನಾ ಕಾಳಿದಾಸನ ಕಾಲ ದೇಶ ವ್ಯಕ್ತಿ ವಿಚಾರಗಳು ಸಪ್ರಮಾಣವಾಗಿ ಏನೂ ತಿಳಿಯುವುದಿಲ್ಲ. ಕಾಳಿದಾಸನ ಗ್ರಂಥಗಳನ್ನು ನೋಡಿದರೆ ಭಾರತೀಯ ವೇದ ಶಾಸ್ತ್ರ ಪುರಾಣ ಗಳ ಪರಿಚಯವೆಲ್ಲವೂ ಅವನಿಗೆ ಇದ್ದಂತೆ ತಿಳಿಯುತ್ತದೆ. ಇಂಥವನು ಕ್ಷಣ ಮಾತ್ರದಲ್ಲಿ ಬೀಜಾಕ್ಷರ ಪ್ರಭಾವದಿಂದ ಕವಿಯಾಗಿ ಪರಿವರ್ತಿತನಾದ

ಕುರುಬನೆಂದು ಹೇಗೆ ನಂಬುವುದು ಸಾಧ್ಯ? ಇದು 'ಕಾಳಿದಾಸ'. ಎಂಬ ಹೆಸರಿನ ಮೇಲೆ ಹುಟ್ಟಿ ಕೈಕಾಲು ಬೆಳೆದ ದಂತಕಥೆಯಾಗಿ ತೋರುತ್ತದೆ. ಭೋಜರಾಜನು ಇದ್ದದ್ದು ಹನ್ನೊಂದನೆಯ ಶತಮಾನದಲ್ಲಿ; ಕಾಳಿದಾಸನು ಇಷ್ಟು ಅರ್ವಾಚೀನನಲ್ಲವೆಂಬುದು ಮುಂದೆ ಹೇಳುವ ಪ್ರಮಾಣಗಳಿಂದ ಗೊತ್ತಾಗುತ್ತದೆ; ಹೀಗೆಯೇ ಕುಮಾರದಾಸನ ಕಥೆಯೂ; ಕುಮಾರದಾಸ ನೇನೋ ಚರಿತ್ರವ್ಯಕ್ತಿಯೇ; ಅವನು ಇದ್ದದ್ದು ಆರನೆಯ ಶತಮಾನ; ಕಾಳಿದಾಸನು ಅದಕ್ಕಿಂತ ಹಿಂದೆಯೇ ಇದ್ದಿರಬೇಕೆಂದು ಹೇಳಲು ಪ್ರಮಾಣ ಗಳಿವೆ; ವೇಶ್ಯಾಸಂಬಂಧವಾದ ಇಂತಹ ಆಭಾಸದ ಕಥೆಗಳಿಗೆ ಕಾಳಿದಾಸನ ಶೃಂಗಾರಪ್ರಿಯತೆಯೇ ಮೂಲವಾಗಿರಬಹುದು.

ಇವುಗಳಂತೆಯೇ ಕಥೆಯಾಗಿ ತೋರುತ್ತಿದ್ದರೂ ಸ್ವಲ್ಪಮಟ್ಟಿಗೆ ಸಾಧಾರವಾಗಿರುವಂತಿರುವ ಮತ್ತೊಂದು ಹೇಳಿಕೆಯುಂಟು. ಅದೇ ನೆಂದರೆ, ಕಾಳಿದಾಸನು ವಿಕ್ರಮಾದಿತ್ಯರಾಯನ ಆಸ್ಥಾನದ ನವಮಣಿಗಳಲ್ಲಿ ಒಬ್ಬನಾಗಿದ್ದನೆಂಬುದು. ಆ 'ನವಮಣಿ'ಗಳ ಹೆಸರುಗಳು ಈ ಶ್ಲೋಕದಲ್ಲಿ ಉಕ್ತವಾಗಿವೆ:—

> ಧನ್ವಂತರಿ ಕ್ಷಪಣಕಾಮರಸಿಂಹ ಶಂಕು
> ಭೇತಾಳ ಭಟ್ಟ ಘಟಕರ್ಪರ ಕಾಳಿದಾಸಾಃ ।
> ಖ್ಯಾತೋ ವರಾಹಮಿಹಿರೋ ನೃಪತೇಸ್ಸಭಾಯಾಂ
> ರತ್ನಾನಿ ವೈ ವರರುಚಿರ್ನವ ವಿಕ್ರಮಸ್ಯ ॥

ಇವರಲ್ಲಿ ಎಲ್ಲರ ಕಾಲವೂ ಸರಿಯಾಗಿ ಗೊತ್ತಿಲ್ಲ; ಗೊತ್ತಿರುವವರೂ ಬೇರೆ ಬೇರೆ ಕಾಲದವರು; ವರಾಹಮಿಹಿರನು ಕ್ರಿ. ಶ. ೫೮೭ ರಲ್ಲಿ ಮೃತ ನಾದಂತೆ ಹೇಳಲು ಆಧಾರವಿದೆ; ಮಿಕ್ಕವರೂ ಒಂದು ವೇಳೆ ಸರಿ ಸುಮಾರು ಆ ಕಾಲದಲ್ಲಿ ಇದ್ದರೆಂದು ಹಾಗೂ ಹೀಗೂ ಸ್ಥಾಪಿಸಬಹುದಾದರೂ ಮುಂದೆ ಹೇಳುವ ಪ್ರಮಾಣಗಳಿಂದ ಕಾಳಿದಾಸನು ಕ್ರಿ. ಶ. ೫೮೭ ರಷ್ಟು ಈಚಿನವನಾಗಲಾರನು. ಆದ್ದರಿಂದ ಈ ಹೇಳಿಕೆಗೂ ಪ್ರಾಮಾಣ್ಯ ಕೊಡ ಲಾಗುವುದಿಲ್ಲ; ಆದರೆ ಈ ಕಥೆಯಿಂದ ಕಾಳಿದಾಸನು ವಿಕ್ರಮಾದಿತ್ಯರಾಯನ ಕಾಲದಲ್ಲಿ ಇದ್ದನೆಂದು ಮಾತ್ರ ಹೇಳಿದರೂ ಹೇಳಬಹುದೆಂದು ತೋರುತ್ತದೆ.

ಇದನ್ನು ಒಪ್ಪಿಕೊಂಡರೂ ಕಾಲ ನಿರ್ಧಾರಕ್ಕೆ ಹೆಚ್ಚು ಸಹಾಯ ವಾಗುವುದಿಲ್ಲ; ಏಕೆಂದರೆ ವಿಕ್ರಮಾದಿತ್ಯ ಎಂಬ ಹೆಸರುಳ್ಳ ರಾಜರು ಭರತ ಖಂಡದಲ್ಲಿ ಹಲವರು ಆಳಿದ್ದಾರೆ. ಇವರೊಳಗೆ ಕ್ರಿ. ಪೂ. ೫೭ ರಲ್ಲಿ ಶಕ

ರನ್ನು ಗೆದ್ದು ತನ್ನದೊಂದು ಶಕವನ್ನು ಸ್ಥಾಪಿಸಿದ ವಿಕ್ರಮಾದಿತ್ಯನೇ ಈ ನವಮಣಿಗಳ ಪೋಷಕನೆಂಬುದು ಸಾಂಪ್ರದಾಯಿಕವಾಗಿ ಬಂದ ನಂಬಿಕೆ. ಇಷ್ಟು ಪ್ರಾಚೀನತೆಯನ್ನು ಕಾಳಿದಾಸನಿಗೆ ಕೊಡಲು ಪಾಶ್ಚಾತ್ಯ ವಿದ್ವಾಂಸರು ಒಪ್ಪುವುದಿಲ್ಲ. ಆರನೆಯ ಶತಮಾನದಲ್ಲಿದ್ದ ಯಶೋಧರ್ಮನಿಗೂ ವಿಕ್ರಮಾದಿತ್ಯನೆಂಬ ಬಿರುದು ಇತ್ತು. ಇವನು (ಶಕರಿಗೆ) ಬದಲಾಗಿ ಹೂಣರನ್ನು ಗೆದ್ದಿದ್ದನು. ಇದನ್ನು ಒಪ್ಪಲು, ಹಿಂದಿನಂತೆ, ಆರನೆಯ ಶತಮಾನಕ್ಕಿಂತ ಹಿಂದೆಯೇ ಕಾಳಿದಾಸನು ಇದ್ದನೆಂದು ತಿಳಿಯಲು ಪ್ರಮಾಣಗಳಿರುವುದರಿಂದ ಸಾಧ್ಯವಿಲ್ಲ. ಇನ್ನು ಇವರಿಬ್ಬರಿಗೂ ಮಧ್ಯೆ ಇದ್ದ 'ವಿಕ್ರಮಾದಿತ್ಯ'ನೆಂದರೆ, ಇಮ್ಮಡಿಯ ಚಂದ್ರಗುಪ್ತ (೩೫೭-೪೧೩) ಮತ್ತು ಇವನ ಮೊಮ್ಮಗ ಸ್ಕಂದಗುಪ್ತ (೪೫೫-೪೬೦). ಈ ಚಂದ್ರಗುಪ್ತನು ಉಜ್ಜಯಿನಿಯಲ್ಲಿ ಈ ಬಿರುದಿನಿಂದ ಸುಮಾರು ಕ್ರಿ. ಶ. ೪೧೩ ರವರೆಗೆ ಆಳುತ್ತಿದ್ದನು. ಇವನು ಕಾಳಿದಾಸನ ಪೋಷಕನಾಗಿದ್ದರೂ ಇರಬಹುದು.[1] ಮತ್ತೆ ಕೆಲವು ಸಂಗತಿಗಳು ಈ ಕಾಲವನ್ನೇ ನಿರ್ದೇಶಿಸುತ್ತವೆ—ಕ್ರಿ. ಶ. ೪೭೦ ರಲ್ಲಿ ವತ್ಸಭಟ್ಟಿ ಬರೆದ ಮಂಡೇಶ್ವರ ಶಿಲಾಪ್ರಶಸ್ತಿಯಲ್ಲಿ ಕಾಳಿದಾಸನ ಸ್ಪಷ್ಟವಾದ ಅನುಕರಣವಿದೆ. 'ವಿಕ್ರಮೋರ್ವಶೀಯ'ದಲ್ಲಿ ಬರುವ ವಿಕ್ರಮನಿಂದ ತನ್ನ ಪೋಷಕನ ಬಿರುದೂ[2] 'ಕುಮಾರಸಂಭವ'ದಲ್ಲಿ ಬರುವ ಕುಮಾರನಿಂದ ಅವನ ಮಗ

---

1. ಈ ಚಂದ್ರಗುಪ್ತ ವಿಕ್ರಮಾದಿತ್ಯನು ಕಾಳಿದಾಸನನ್ನು ನಾಲ್ಕನೆಯ ಶತಮಾನದ ಕೊನೆಯಲ್ಲಿ ಆಳುತ್ತಿದ್ದ (ಭಗೀರಥನೆಂಬ) ಕುಂತಲ (ಕದಂಬ) ರಾಜನ ಸಭೆಗೆ ರಾಯಭಾರಿಯಾಗಿ ಕಳುಹಿಸಿದ್ದನೆಂದು ಪ್ರತೀತಿಯಿದೆ :—'ಭೋಜನ ಶೃಂಗಾರ ಪ್ರಕಾಶಿಕಾ', ಬಾಲಸುಬ್ರಹ್ಮಣ್ಯ ಅಯ್ಯರ A study in Kalidasa in Relation to Political Science (P.O.C., Madras), P[6] 'ಹೇಮಚಂದ್ರನ ಔಚಿತ್ಯ ವಿಚಾರ ಚರ್ಚಾ', ಪು. ೩೦–೪೦. George Moreas—The Kadamba Kula ; Jayaswal—J B O R S, March, 1932

2. ವಿಕ್ರಮೋರ್ವಶೀಯವೆಂದರೆ, ವಿಕ್ರಮ (ಪರಾಕ್ರಮ) ದಿಂದ ಪಡೆದ ಉರ್ವಶಿಯ ಕಥೆ ಎಂದು ಅರ್ಥವಾಗಬಹುದು. ಆದರೆ ವಿಕ್ರಮ ಮತ್ತು ಉರ್ವಶಿ ಇವರ ಕಥೆ ಎಂದು ಅರ್ಥಮಾಡುವುದು ಹೆಚ್ಚು ಉಪಪನ್ನವಾಗಿದೆ ('ಮಾಳವಿಕಾಗ್ನಿಮಿತ್ರ' ಎಂಬಲ್ಲಿ ಹೀಗೆಯೇ.) ಆದರೆ ಇಲ್ಲಿಯ ನಾಯಕನು ಪುರೂರವಸ್ಸು; ಅವನಿಗೆ ವೇದ ಪುರಾಣಾದಿ ಕಥೆಗಳಲ್ಲಿಯೂ ವಿಕ್ರಮನೆಂಬ ಹೆಸರಿಲ್ಲ.

ಇದರಂತೆಯೇ ದಿಲೀಪಾದಿಗಳ ನೆವದಲ್ಲಿ ಸಮುದ್ರಗುಪ್ತ ಮುಂತಾದ ಗುಪ್ತರಾಜರು ವರ್ಣಿತರಾಗಿದ್ದಾರೆಂದು ಊಹಿಸಲ್ಪಟ್ಟಿದೆ–S C De, Kalidasa and Vikramaditya, Ch III, J R A S, 1909, 731

ನಾದ ಕುಮಾರಗುಪ್ತನ (ಅಥವಾ ಮೊಮ್ಮಗನಾದ ಸ್ಕಾಂದಗುಪ್ತನ ?) ಜನನವೂ 'ಮಾಳವಿಕಾಗ್ನಿ'ಮಿತ್ರದಲ್ಲಿ ಅಶ್ವಮೇಧಯಾಗದಿಂದ ಸಮುದ್ರ ಗುಪ್ತನ ಅಶ್ವಮೇಧಯಾಗ ವೃತ್ತಾಂತವೂ ಸೂಚಿತವಾಗಬೇಕೆಂಬುದು ಕವಿಯ ಆಶಯವಿರಬಹುದು. ಕಾಳಿದಾಸನ ಕಾವ್ಯಗಳು ಶಾಂತಿಸಂತೃಪ್ತಿ ಪೂರಿತವಾವ ಜನಜೀವನವನ್ನು ಪ್ರತಿಬಿಂಬಿಸುತ್ತವೆ; ಗುಪ್ತರ ಕಾಲದಲ್ಲಿ, ಹೊರಗಿನಿಂದ ಶತ್ರುಪೀಡೆ ಇರಲಿಲ್ಲ. ಒಳದೇಶದಲ್ಲಿ ಸೌಭಾಗ್ಯಸಂಪತ್ತುಗಳು ನೆಲಸಿದ್ದುವು. ಆದ್ದರಿಂದ ಪ್ರಜೆಗಳು ನಿರಾತಂಕ ಜೀವನವನ್ನು ಜೀವಿಸು ತ್ತಿದ್ದರು. ದೇಶದಲ್ಲಿ ಅಭ್ಯುದಯವಿದ್ದಾಗ ಅದು ಸರ್ವತೋಮುಖವಾಗಿರು ತ್ತದೆ. ಈ ಇಮ್ಮಡಿ ಚಂದ್ರಗುಪ್ತನ ಕಾಲದಲ್ಲಿದ್ದ ರಾಜಕೀಯ ಮತ್ತು ಆರ್ಥಿಕ ಅಭ್ಯುದಯಕ್ಕೆ ತಕ್ಕಂತೆ ಸಾಹಿತ್ಯದಲ್ಲಿಯೂ ಅಭ್ಯುದಯವಿದ್ದು ಕಾಳಿದಾಸನು ಅದರ ಕಿರೀಟರೂಪವಾಗಿ ಶೋಭಿಸಿರಬಹುದು. ಕಾಳಿದಾಸನು 'ಉಚ್ಚ' 'ಜಾಮಿತ್ರ' ಮುಂತಾದ ಜ್ಯೋತಿಷಶಬ್ದಗಳನ್ನು ಉಪಯೋಗಿ ಸುತ್ತಾನೆ. ಇವು ಗ್ರೀಕ್ ಪದಗಳಿಂದ ಜನ್ಯವಾದವು. ಇದನ್ನು ನೋಡಿದರೆ ಅವನು ಕ್ರಿ ಶ. ಸುಮಾರು ೩೫೦ ಕ್ಕಿಂತ ಹಿಂದಿನವನಲ್ಲವೆಂದು ಹೇಳಬೇಕಾ ಗುತ್ತದೆ. ಮಲ್ಲಿನಾಥನು (೧೪ ನೆಯ ಶತ) 'ದಿಙ್ನಾಗಾನಾಂ ಪಥಿ ಪರಿ ಹರನ್ ಸ್ಥೂಲಹಸ್ತಾವಲೇಪಾನ್' ಎಂದು ಮುಗಿಯುವ ಮೇಘಸಂದೇಶ ಶ್ಲೋಕದಲ್ಲಿ (೧೪) ಕಾಳಿದಾಸನು ದಿಙ್ನಾಗ ಎಂಬ ತನ್ನ ಪ್ರತಿಪಕ್ಷಿಯನ್ನು ಧ್ವನಿಯಿಂದ ಸೂಚಿಸಿದ್ದಾನೆಂದು ವ್ಯಾಖ್ಯಾನಮಾಡಿದ್ದಾನೆ. ಮಲ್ಲಿನಾಥನು ಕಾಳಿದಾಸನಿಗಿಂತ ಸುಮಾರು ೧೦೦೦ ವರ್ಷ ಈಚೆ ಇದ್ದವನು; ಆದ್ದರಿಂದ ಈ ವ್ಯಾಖ್ಯಾನಕ್ಕೆ ಪ್ರಾಮಾಣ್ಯವು ಸಂದೇಹ; ಒಂದು ಪಕ್ಷ ಪ್ರಾಮಾಣ್ಯವನ್ನು ಒಪ್ಪಿದರೂ ದಿಙ್ನಾಗನ ಕಾಲವು ಸುಮಾರು ೪೦೦ ಆಗುತ್ತದೆ.[3] ನಾಟಕ ಗಳಲ್ಲಿ ಬರುವ ಪ್ರಾಕೃತಭಾಷೆಯನ್ನು ನೋಡಿದರೆ ಅಶ್ವಘೋಷನ ಪ್ರಾಕೃ ತವು ಪ್ರಾಚೀನತಮವೆಂದೂ ಭಾಸನ ಪ್ರಾಕೃತವು ಅದಕ್ಕಿಂತ ಈಚಿನದೆಂದೂ ಕಾಳಿದಾಸನ ಪ್ರಾಕೃತವು ಅದಕ್ಕಿಂತ ಈಚಿನದೆಂದೂ ತೋರುತ್ತದೆ. ಅಶ್ವ ಘೋಷನ ಕಾಲ ಕ್ರಿ. ಶ. ಎರಡನೆಯ ಶತಮಾನದ ಆದಿ; ಭಾಸನದು ಮೂರನೆಯ ಶತಮಾನ; ಆದ್ದರಿಂದ ಕಾಳಿದಾಸನದು ನಾಲ್ಕು ಅಥವಾ ಐದನೆಯ ಶತಮಾನವಾಗುತ್ತದೆ.

ಈ ವಾದಸರಣಿಯಿಂದ ಕಾಳಿದಾಸನು ವತ್ಸಭಟ್ಟಿಗೆ (ಕ್ರಿ. ಶ. ೪೭೩)

---

3. Keith : Indian Logic P 28

ಹಿಂದೆ ಇರಬೇಕೆಂದು ತಕ್ಕಮಟ್ಟಿನ ಧೈರ್ಯದಿಂದ ಹೇಳಬಹುದೇ ಹೊರತು ಎಷ್ಟು ಹಿಂದೆ ಎಂದು ನಿಶ್ಚಯಿಸುವಂತಿಲ್ಲ. ಅಲ್ಲದೆ, ಪ್ರಾಕೃತರೂಪಭೇದಕ್ಕೆ ಕಾರಣವೇನಾದರೂ ಇರಲಿ, ಅಶ್ವಘೋಷನೇ ಕಾಳಿದಾಸನ ಕಾವ್ಯಸರಣಿಯನ್ನು ಅನುಕರಣಮಾಡಿದ್ದಾನೆ, ಅವನ ಕಾಲವೂ ಕ್ರಿ. ಶ. ೧೦೦ ಎನ್ನುವುದಕ್ಕೆ ಪ್ರಮಾಣ ಸಾಲದು; ಒಂದು ವೇಳೆ ಅವನು ಆಗ ಇದ್ದರೂ ಅವನಿಗಿಂತ ಹಿಂದೆ ಕಾಳಿದಾಸನು ಕ್ರಿ. ಪೂ. ಸುಮಾರು ೧೦೦--೧೫೦ ರಲ್ಲಿ ಇದ್ದಿರಬಹುದು–ಎಂಬುದು ಇನ್ನೊಂದು[4] ಪಕ್ಷದವರ ಮತ. ಈ ಪಕ್ಷಕ್ಕೆ ಮಾಳವಿಕಾಗ್ನಿಮಿತ್ರದಲ್ಲಿರುವ ಐತಿಹಾಸಿಕ ಭಿತ್ತಿ ಉಪಷ್ಟಂಭಕವಾಗುತ್ತದೆ. ಅದರಲ್ಲಿ ಬರುವ ಪುಷ್ಪ(ಷ್ಯ)ಮಿತ್ರ, ಅಗ್ನಿಮಿತ್ರ, ವಸುಮಿತ್ರಾದಿ ಶುಂಗವಂಶೀಯರಾದ ರಾಜರು ಕ್ರಿ. ಪೂ. ೧೭೮ ರಿಂದ ಈಚೆಗೆ ಇದ್ದ ಚರಿತ್ರವ್ಯಕ್ತಿಗಳು. ಅದರಲ್ಲಿ ಅಗ್ನಿಮಿತ್ರನ ಬಾಯಲ್ಲಿ ಹೇಳಿಸಿರುವ ಭರತವಾಕ್ಯವೂ ಅವನು ಬಹುಪತ್ನಿಯುಳ್ಳವನಾದರೆ ಅದನ್ನು ಸಾಧಿಸಿರುವ ಯುಕ್ತಿಯೂ (V· 19) ತನ್ನ ಕಾಲದ ರಾಜನಲ್ಲಿ ಆದರ ಗೌರವಗಳಿಂದ ಕಲ್ಪಿಸಿದಂತಿವೆ.[5] ಶಾಕುಂತಲದಲ್ಲಿ ದುಷ್ಯಂತನು ಧನಮಿತ್ರನ ಹೆಂಡತಿಗೆ ಅವನ ಆಸ್ತಿಯನ್ನು ಕೊಡಿಸಿದ ಸಂಗತಿಯನ್ನೂ, ಬೆಸ್ತರವನಿಗೆ ಉಂಗುರದ ಕಳವಿಗಾಗಿ ಮರಣದಂಡನೆಯಾಗಬಹುದೆಂಬ ಸಂದರ್ಭವನ್ನೂ ಪರಿಶೀಲಿಸಿದರೆ, ಅದು ಸುಮಾರು ಕ್ರಿ. ಪೂ. ೧ ನೆಯ ಶತಮಾನದಲ್ಲಿ ಪ್ರಚಾರವಾಗಿದ್ದ ಬೃಹಸ್ಪತಿಯ ಧರ್ಮಶಾಸ್ತ್ರಕ್ಕೆ ಅನುಸಾರವಾಗಿ ತೋರುತ್ತದೆ.

ಕಾಳಿದಾಸನ ಜನ್ಮಸ್ಥಳ, ವಾಸಸ್ಥಳ, ಜೀವಿತವೃತ್ತಾಂತಾದಿಗಳೊಂದೂ ಗೊತ್ತಿಲ್ಲ. ಅವನ ಗ್ರಂಥಗಳಲ್ಲಿ ಉಜ್ಜಯಿನಿಯ ಅಭಿಮಾನವು ತುಂಬ ವ್ಯಕ್ತವಾಗಿರುವುದರಿಂದ ಅವನು ಉಜ್ಜಯಿನಿಯಲ್ಲಿದ್ದಿರಬಹುದೆಂದೂ, ಕಾಶ್ಮೀರದಲ್ಲಿ ಮಾತ್ರ ಬೆಳೆಯುವ ಕೇಸರ ಪುಷ್ಪವನ್ನು ವರ್ಣಿಸಿ ಅದರ ಸಾಕ್ಷಾತ್ ಪರಿಚಯವನ್ನು ವ್ಯಕ್ತಪಡಿಸಿರುವುದರಿಂದ ಅವನು ಕಾಶ್ಮೀರವಾಸಿಯಾಗಿದ್ದಿರಬಹುದೆಂದೂ, ರಘುವಿನ ದಿಗ್ವಿಜಯದಲ್ಲಿ ಹಿಂದೂಸ್ಥಾನವನ್ನೆಲ್ಲಾ ಪ್ರದಕ್ಷಿಣೆಯಾಗಿ, ತದ್ವತ್ತಾಗಿ ವರ್ಣಿಸಿರುವುದರಿಂದ ತನ್ನ ಪೋಷಕನೊಡನೆ ಭರತಖಂಡವನ್ನು ಆದ್ಯಂತವಾಗಿ ಸಂಚಾರಮಾಡಿರಬಹು-

---

4. ಕೆ. ಜಿ. ಶಂಕರ, ನಂದರ್ಗಿಕರ್, ಕಾಳಿ, 75-25 B C ; I H Q, 1,309 ff

5. " ಮಹತ್ ಖಲು ಪುರುಷಾಕಾರಮಿದಂ ಜ್ಯೋತಿಃ " (ಅಂಕ ೧.)

S. Ray, P O C, I (1920)

ದೆಂದೂ ಹೇಳುತ್ತಾರೆ; ಆದರೆ ಇದೆಲ್ಲ ಬರಿಯ ಊಹೆ. ಕಥಾಸರಿತ್ಸಾಗರದಲ್ಲಿ (ಲಾವಾಣಕ ಲಂಬಕ) ವತ್ಸರಾಜನ ದಿಗ್ವಿಜಯ ವರ್ಣನವಿದೆ; ಕಥಾಸರಿತ್ಸಾಗರವು ಈಚಿನದಾದರೂ ಅದು ಬೃಹತ್ಕಥೆಯ ಆಧಾರದ ಮೇಲೆ ಬರೆದದ್ದು; ಇದು ಕಾಳಿದಾಸನ ಮತ್ತು ಅಶ್ವಘೋಷನ ವರ್ಣನೆಗಳಿಗೆ ಎಷ್ಟುಮಟ್ಟಿಗೆ ಮೂಲವೋ,ಅವರ ಅನುಭವವೇ ಎಷ್ಟುಮಟ್ಟಿಗೆ ಮೂಲವೋ ಸಂದೇಹ. ಅವನ ಮತವಿಚಾರವೂ ಹೀಗೆಯೇ; ಅವನ ಗ್ರಂಥಗಳಲ್ಲಿ ಶಿವಸ್ತೋತ್ರವೂ ಬರುತ್ತದೆ, ವಿಷ್ಣುಸ್ತೋತ್ರವೂ ಬರುತ್ತದೆ; ಜೊತೆಗೆ ಅದಕ್ಕೆ ಅದ್ವೈತ ವೇದಾಂತಪರವಾದ ಅರ್ಥವೂ ಉಪನಿಷತ್ತತ್ತ್ವಗಳೂ ಬರುತ್ತವೆ. ಅವನ ಕಾವ್ಯನಾಟಕಗಳನ್ನು ಓದುತ್ತಿರುವಾಗ ಅವನ ಚಿತ್ರವು ಹೃದಯದಲ್ಲಿ ಪ್ರತಿಬಿಂಬಿತವಾಗುತ್ತದೆ; ಆದರೆ ಅದು ಅಗ್ರಾಹ್ಯವೂ ಅನಿರ್ದೇಶ್ಯವೂ ಆದ ಸಾರಸ್ವತ ಚಿತ್ರ. ಎಷ್ಟೋ ಅರ್ವಾಚೀನ ನಾಟಕಕರ್ತರು ತಮ್ಮ ದೇಶ, ಕಾಲ, ಪಾಂಡಿತ್ಯ, ವಂಶಪರಂಪರೆಗಳಿಂದ ಪ್ರಸ್ತಾವನೆಯನ್ನು ತುಂಬಿರುವಾಗ ಕಾಳಿದಾಸನು ತನ್ನ ಹೆಸರನ್ನು ಹೊರತು ಮತ್ತೇನನ್ನೂ ಹೇಳಿಲ್ಲ: ಭಾಸನಿಗೆ ಅದಕ್ಕೂ ಮನಸ್ಸು ಬರಲಿಲ್ಲ.

ಕಾಳಿದಾಸನ ನಾಟಕಗಳು ಮೂರು — ಮಾಳವಿಕಾಗ್ನಿಮಿತ್ರ, ವಿಕ್ರಮೋರ್ವಶೀಯ, ಶಾಕುಂತಲ. ಇವು ಈ ಕ್ರಮದಲ್ಲಿಯೇ ಬರೆದವಿರಬಹುದೆಂದು ತೋರುತ್ತದೆ. ಏಕೆಂದರೆ ಮಾಳವಿಕಾಗ್ನಿಮಿತ್ರದ ಪ್ರಸ್ತಾವನೆಯಲ್ಲಿ ಕಾಳಿದಾಸನು ತನ್ನ ಸಾಮರ್ಥ್ಯದಲ್ಲಿ ತೋರಿಸಿಕೊಂಡಿರುವ ಅಧೈರ್ಯವು ವಿಕ್ರಮೋರ್ವಶೀಯದಲ್ಲಿ ಕಡಮೆಯಾಗಿದೆ; ಶಾಕುಂತಲದಲ್ಲಿ ಆತ್ಮಾಭಿಮಾನ ಖಂಡನವೂ ನಮ್ರತೆಯೂ ಕಂಡುಬಂದರೂ ಅದರಲ್ಲಿ ಒಂದು ಗೂಢವಾದ ಪ್ರಬಲವಾದ ಆತ್ಮವಿಶ್ವಾಸವೂ ವ್ಯಕ್ತವಾಗುತ್ತದೆ.[6] ಅಲ್ಲದೆ ಮಾಳವಿ

---

6. ೧. ಪಾರಿಪಾರ್ಶ್ವಕಃ—ಮಾ ತಾವತ್. ಪ್ರಥಿತಯಶಸಾಂ ಭಾಸ ಸೌಮಿಲ್ಲ ಕವಿಪುತ್ರಾದೀನಾಂ ಪ್ರಬಂಧಾನತಿಕ್ರಮ್ಯ ವರ್ತಮಾನ ಕವೇಃ ಕಾಲಿದಾಸಸ್ಯ ಕ್ರಿಯಾಯಾಂ ಕಥಂ ಬಹುಮಾನಃ ?—'ಮಾಲವಿಕಾಗ್ನಿಮಿತ್ರ.'

೨. ಸೂತ್ರಧಾರಃ—ಮಾರಿಷ, ಪರಿಷದೇಷಾ ಪೂರ್ವೇಷಾಂ ಕವೀನಾಂ ದೃಷ್ಟರಸಪ್ರಬಂಧಾ . . . ಪ್ರಣಯಿಷು ವಾ ದಾಕ್ಷಿಣ್ಯಾತ್ ಅಥವಾ ಸದ್ವಸ್ತು ಪುರುಷಬಹುಮಾನಾತ್ । ಶೃಣುತ ಜನಾ ಅವಧಾನಾತ್ ಕ್ರಿಯಾಮಿಮಾಂ ಕಾಲಿದಾಸಸ್ಯ—'ವಿಕ್ರಮೋರ್ವಶೀಯ.'

೩. ನಟೀ—ಸುವಿಹಿತಪ್ರಯೋಗತಯಾ ಆರ್ಯಸ್ಯ ನ ಕಿಮಪಿ ಪರಿಹಾಪಯಿಷ್ಯತಿ. ಸೂತ್ರಧಾರಃ—ಆರ್ಯೇ ಕಥಯಾಮಿ ತೇ ಭೂತಾರ್ಥಮ್—ಆ ಪರಿತೋಷಾತ್ ವಿದುಷಾಂ—'ಶಾಕುಂತಲ.'

ಕಾಗ್ನಿಮಿತ್ರದಲ್ಲಿ ಕವಿ ಪ್ರಯತ್ನಪುರಸ್ಸರವಾಗಿ ಚಮತ್ಕಾರಗಳನ್ನು ಯೋಚಿಸಿ ಮಾತುಗಳನ್ನು ತಿದ್ದಿ ಕಡೆದು ಬರೆದಿರುವುದೂ, ಅವನ ಕಲಾಕೌಶಲ್ಯವು ಪೂರ್ಣಪರಿಪಕ್ವಸ್ಥಿತಿಗೆ ಇನ್ನೂ ಬರದಿರುವುದೂ, ಅದು ವಿಕ್ರಮೋರ್ವಶೀಯದಲ್ಲಿ ಮಾಗಿ ಶಾಕುಂತಲದಲ್ಲಿ ಪೂರ್ಣತೆ ಪಡೆದಿರುವುದೂ ವಿಮರ್ಶ ದೃಷ್ಟಿಯಿಂದ ಪರಿಶೀಲಿಸುವವರಿಗೆ ಗೋಚರವಾಗದಿರುವುದಿಲ್ಲ. ಶಾಕುಂತಲದಲ್ಲಿರುವ ಪ್ರತಿಭೆ ತೀಕ್ಷ್ಣವೂ ನಿಸರ್ಗಳವೂ ಆದದ್ದು. ವಾಗ್ಧೋರಣೆ ಗಂಭೀರವೂ ಧಾರಾಳವೂ ಆದದ್ದು. ಇಲ್ಲಿ ಅವನು ಅರ್ಥವನ್ನು ಚಿಂತಿಸಿ ಚಿಂತಿಸಿ, ಮಾತುಗಳನ್ನು ಹಾಕಿ ತೆಗೆದು, ವಾಕ್ಯಗಳನ್ನು ತಿದ್ದಿ ಕಡೆದು ಬರೆದಂತಿಲ್ಲ. ಅರ್ಥಕ್ಕೆ ಅನುಸಾರವಾಗಿ ಮಾತುಗಳು ಹೊರಡುತ್ತವೆ; ಅವನ ಕೈ ಅಷ್ಟು ಪಳಗಿದೆ.

'ಮಾಳವಿಕಾಗ್ನಿಮಿತ್ರ'ವು ಐದು ಅಂಕಗಳ 'ನಾಟಕ.' ಅದರ ಕಥಾಸಾರಾಂಶವಿದು—

ವಿದಿಶಾಪಟ್ಟಣದಲ್ಲಿ ಅಗ್ನಿಮಿತ್ರನೆಂಬ ಅರಸು ಆಳುತ್ತಿದ್ದನು; ಅವನಿಗೆ ಧಾರಿಣೀ ಇರಾವತೀ ಎಂಬ ಹೆಂಡಿರಿದ್ದರು; ಅವರಲ್ಲಿ ಧಾರಿಣಿಯೇ ಮಹಾರಾಣಿ; ಒಂದು ದಿನ ಅವನು ತನ್ನ ಅಂತಃಪುರಸ್ತ್ರೀಯರ ಚಿತ್ರವೊಂದನ್ನು ನೋಡಲು ಅದರಲ್ಲಿ ಮಾಳವಿಕೆಯನ್ನು ಕಂಡು ಅವಳ ರೂಪದಿಂದ ಮುಗ್ಧನಾದನು. ಅವಳನ್ನು ರಾಜನು ಕಣ್ಣಾರ ನೋಡುವುದಕ್ಕೆ ಅವನ ಸ್ನೇಹಿತನಾದ ಗೌತಮನು (ವಿದೂಷಕ) ಒಂದು ತಂತ್ರವನ್ನು ಯೋಚಿಸಿ ಆಸ್ಥಾನದ ನಾಟ್ಯಾಚಾರ್ಯರಾದ ಗಣದಾಸ ಹರದತ್ತರಿಗೆ ತಮ್ಮ ತಮ್ಮ ಕೌಶಲಸಾಮರ್ಥ್ಯಗಳಲ್ಲಿ ಜಗಳ ಹುಟ್ಟುವಂತೆ ಮಾಡಿದನು. ಇದು ರಾಜನ ಹತ್ತಿರಕ್ಕೆ ಬಂತು. ರಾಜನು ಅಂತಃಪುರದಲ್ಲಿದ್ದ ಕೌಶಿಕಿ ಎಂಬ ಪರಿವ್ರಾಜಿಕೆಗೆ ಇದನ್ನು ತೀರ್ಮಾನಕ್ಕಾಗಿ ಒಪ್ಪಿಸಿದನು; ಆಕೆ ಈ ಆಚಾರ್ಯರಿಬ್ಬರೂ ತಮ್ಮ ತಮ್ಮ ಶಿಷ್ಯೆಯರ ಅಭಿನಯವನ್ನು ಪ್ರದರ್ಶಿಸಿದರೆ ಆಗ ಅವರ ಯೋಗ್ಯತೆಯನ್ನು ಗೊತ್ತುಮಾಡಬಹುದೆಂದಳು. ಅದರಂತೆ ಮಾಳವಿಕೆಯ ನರ್ತನವಾಯಿತು; ರಾಜನ ಕಣ್ಣು ತಣಿಯಿತು: ಮನಸ್ಸೂ ಕಲಕಿತು.

ಮಾಳವಿಕಾಗ್ನಿಮಿತ್ರರ ಪರಸ್ಪರ ಸಂದರ್ಶನಕ್ಕೆ ಏರ್ಪಡಿಸಿದ ಗೌತಮನೇ ಅವರ ಸಂಗಮಕ್ಕೂ ಏರ್ಪಾಡು ಮಾಡಲು ಚಿಂತಿಸಿ, ಮಾಳವಿಕೆಯ ಸಖಿಯಾದ ಬಕುಳಾವಳಿಕೆಯನ್ನು ಒಳ ಹಾಕಿಕೊಂಡನು. ಈ ಸಮಯದಲ್ಲಿ ಇನ್ನೂ ಹೂ ಬಿಡದೆ ಇದ್ದ ರಾಜೋದ್ಯಾನದ ಅಶೋಕ ವೃಕ್ಷಕ್ಕೆ ದೋಹದ ಮಾಡಿ ಅದರಲ್ಲಿ ಹೂ ಬಿಡಿಸಬೇಕಾಗಿತ್ತು. ಸುಂದರಿಯಾದ ಯುವತಿ ತನ್ನ ಹೆಜ್ಜೆಯನ್ನು ಬಣ್ಣ ಬಂಗಾರಗಳಿಂದ ಅಲಂಕರಿಸಿಕೊಂಡು ತನ್ನ ಪದತಾಡನದ ರುಚಿಯನ್ನು ತೋರಿಸುವುದೇ ಆ ಗಿಡಕ್ಕೆ ದೋಹದ; ಇದನ್ನು ಯಾವಾಗಲೂ ಧಾರಿಣಿ ಮಾಡುತ್ತಿದ್ದಳೆಂದು ತೋರುತ್ತದೆ;

ಆದರೆ ಈಗ ಅವಳಿಗೆ ಕಾಲು ಸ್ವಲ್ಪ ಊನವಾಗಿದ್ದು ತಿರುಗಾಡಲಾರದೆ, ಗುಣೈಕಪಕ್ಷಪಾತಿನಿಯಾಗಿದ್ದರಿಂದ, ಆ ಕೆಲಸವನ್ನು ಮಾಳವಿಕೆಗೆ ಒಪ್ಪಿಸಿದ್ದಳು; ಅವಳು ಈ ಕೆಲಸಕ್ಕಾಗಿ ಉದ್ಯಾನವನಕ್ಕೆ ಬಂದಿರಲು ಅವಳ ಹೆಜ್ಜೆಗೆ ಅಲಂಕಾರ ಮಾಡುತ್ತ ಬಕುಳಾವಳಿಕೆ ಅವಳ ಪ್ರಣಯುವನ್ನು ತಿಳಿದು ರಾಜನ ಪ್ರಣಯುವನ್ನು ತಿಳಿಸಿದಳು. ಈಗ ರಾಜನು ಮುಂದೆ ಬಂದು ಮಾಳವಿಕೆಯೊಡನೆ ಉಪಚಾರದ ಮಾತುಗಳನ್ನಾಡುತ್ತಿರುವಾಗ, ಆ ಉದ್ಯಾನವನಕ್ಕೆ ಉಯ್ಯಾಲೆ ಆಟಕ್ಕೆಂದು ಬಂದು ಇದೆಲ್ಲವನ್ನೂ ಹೊಂಚಿ ನೋಡುತ್ತಿದ್ದ ಇರಾವತಿ ಶಿವಪೂಜೆಯಲ್ಲಿ ಕರಡಿ ಬಿಟ್ಟಂತೆ ಕಾಣಿಸಿಕೊಳ್ಳುವಳು; ಎಲ್ಲವೂ ವಿರಸವಾಗುವುದು. ರಾಣಿಯ ಅಪ್ಪಣೆಯಂತೆ ಮಾಳವಿಕೆಗೂ ಅವಳ ಸಖಿಗೂ ಬಂಧನವಾಗುವುದು

ಗೌತಮನು ನಿರಾಶನಾಗಲಿಲ್ಲ. ವಿಚಾರ ಮಾಡಿದ್ದರಲ್ಲಿ, ಮಹಾರಾಣಿಯ ನಾಗ ಮುದ್ರಿಕೆಯನ್ನು ಕಾರಾಗಾರದ ಕಾವಲುಗಾರಳಾದ ಮಾಧವಿಕೆಗೆ ತೋರಿಸಿದರೆ ಬಂಧ ವಿಮೋಚನೆಯಾಗುವುದೆಂದು ತಿಳಿಯಬಂತು. ಆದ್ದರಿಂದ ಈಗ ಅವನು ವೈದ್ಯನಾದ ಧ್ರುವಸಿದ್ಧಿಯನ್ನು ಒಳಹಾಕಿಕೊಂಡು, ತನಗೆ ಹಾವು ಕಚ್ಚಿದಂತೆ ಕುಂಟುತ್ತ ನರಳುತ್ತ ಬಂದು ಮಹಾರಾಣಿಗೆ ಹೇಳಿಕೊಂಡನು. ಆಕೆ ಅವನನ್ನು ಧ್ರುವಸಿದ್ಧಿಯ ಹತ್ತಿರ ಚಿಕಿತ್ಸೆಗೆ ಕಳುಹಿಸಲು, ಅವನು 'ಉದಕುಂಭ ವಿಧಾನ'ದಿಂದ ವಿಷವಿಳಿಸುವುದಕ್ಕೆ ನಾಗಮುದ್ರಿಕೆ ಬೇಕೆಂದನು. ಇವರ ಪಿತೂರಿಗೆ ಸೇರಿದ್ದ ಮತ್ತೊಬ್ಬನು ಇಷ್ಟು ಹೊತ್ತಿಗೆ ಬಂದು ರಾಜನನ್ನು ಮಂತ್ರಿ ಅಗತ್ಯವಾಗಿ ನೋಡಬೇಕಾಗಿತ್ತೆಂದು ಹೇಳಿ ಅವನನ್ನು ಕರೆದುಕೊಂಡು ಹೋದನು. ವಿದೂಷಕನು ಮಾಳವಿಕೆಯನ್ನು ಬಿಡಿಸಿ ರಾಜನಿಗೂ ಅವಳಿಗೂ ಸರಸಸಲ್ಲಾಪಗಳಿಗೆ ಅವಕಾಶ ಮಾಡಿಕೊಟ್ಟು ತಾನು ಕೊಟಡಿಯ ಬಾಗಿಲಲ್ಲಿ ಕಾವಲು ಕೂತುಕೊಂಡಿದ್ದು, ಹಾಗೇ ನಿದ್ದೆ ಹೋಗಿಬಿಡುವನು. ಇದನ್ನು ನೋಡಿದ ಒಬ್ಬ ಪರಿಚಾರಿಕೆ ಅನುಮಾನಗೊಂಡು ಈ ವರ್ತಮಾನವನ್ನು ಇರಾವತಿಗೆ ತಿಳಿಸಲು, ಅವಳು ಬಂದು ನೋಡುತ್ತಾಳೆ—ತನ್ನ ಗಂಡನ ಪ್ರಣಯ ಚರಿತ್ರೆ ಬೆಳೆಯುತ್ತಿದೆ! ದೊರೆಗೆ ಏನು ಮಾಡಬೇಕೆಂದು ತೋರದೆ ಇರುವಾಗ ಅವನ ಮಗಳು ವಸುಲಕ್ಷ್ಮಿ ಕೋತಿಗೆ ಹೆದರಿಕೊಂಡಿತ್ತೆಂದೂ ಯಾರು ಎಷ್ಟು ಸಮಾಧಾನ ಮಾಡಿದರೂ ಸಮಾಧಾನವಾಗಲೊಲ್ಲದೆಂದೂ ವರ್ತಮಾನ ಬರುವುದು. ರಾಜನು ಈ ನೆವ ಸಿಕ್ಕಿದ್ದೇ ಸಾಕೆಂದು ಹೊರಟು ಹೋಗುವನು. ಇತ್ತ ಅಶೋಕವು ಪುಷ್ಪಿತವಾಯಿತೆಂಬ ವರ್ತಮಾನವೂ ಬಂತು. ಅದು ಐದು ದಿನಗಳಲ್ಲಿ ಪುಷ್ಪಿತವಾದರೆ ಮಾಳವಿಕೆಯ 'ಅಭಿಲಾಷೆಯನ್ನು ಪೂರ್ತಿಮಾಡು'ವುದಾಗಿ ಧಾರಿಣೀದೇವಿ ಹೇಳಿದ್ದಳು; ಇದನ್ನು ನೆನೆದು ಮಾಳವಿಕೆ ಸ್ವಲ್ಪ ಧೈರ್ಯ ತಂದುಕೊಂಡು ತನ್ನ ಸಖಿಯೊಡನೆ ಹೊರಟುಹೋದಳು.

ಈಗ ದೊರೆಯ ಭಾವಮೈದುನನೂ ಸೇನಾಪತಿಯೂ ಆಗಿದ್ದ ವೀರಸೇನನು ವಿದರ್ಭದೇಶದ ಮೇಲೆ ದಂಡೆತ್ತಿ ಹೋಗಿ ಅಲ್ಲಿಯ ರಾಜನಾಗಿದ್ದ ಯಜ್ಞಸೇನನನ್ನು ಸೋಲಿಸಿ, ಅವನು ಸೆರೆಯಲ್ಲಿಟ್ಟಿದ್ದ ಅವನ ದಾಯಾದಿ ಮಾಧವಸೇನನನ್ನು ಬಿಡಿಸಿ ತನ್ನ ವಿಜಯವೃತ್ತಾಂತವನ್ನು ಮಹಾರಾಜನಿಗೆ ಹೇಳಿಕಳುಹಿಸಿದನು. ಅವನು ಈ

ವೃತ್ತಾಂತದೊಡನೆ ಕಳುಹಿಸಿದ ಉಪಹಾರ ವಸ್ತುಗಳಲ್ಲಿ ಇಬ್ಬರು ಹುಡುಗಿಯರೂ ಇದ್ದರು. ಅವರು ಮಾಳವಿಕೆಯನ್ನು ನೋಡಿ ಅವಳು ತಮ್ಮ ರಾಜಪುತ್ರಿಯೆಂದು ಗುರುತಿಸಿದರು. ವಿಚಾರ ಮಾಡಲಾಗಿ ಅವಳು ಮಾಧವಸೇನನ ತಂಗಿಯೆಂದು ಗೊತ್ತಾಯಿತು. ಮಾಧವಸೇನನು ಸೆರೆಸಿಕ್ಕಲು ಅವನ ಮಂತ್ರಿಯಾದ ಸುಮತಿ ತನ್ನತಂಗಿ ಕೌಶಿಕಿಯನ್ನೂ ತನ್ನ ರಾಜನ ತಂಗಿ ಮಾಳವಿಕೆಯನ್ನೂ ಕರೆದುಕೊಂಡು ಹೊರಟು ಒಂದುವರ್ತಕರ ಗುಂಪನ್ನು ಸೇರಿ ವಿದಿಶಾಪಟ್ಟಣಕ್ಕೆ ಬರುತ್ತಿದ್ದನು. ಮಾಳವಿಕೆಯನ್ನು ಅಗ್ನಿಮಿತ್ರನಿಗೆ ಮದುವೆ ಮಾಡಿಕೊಡಬೇಕೆಂಬುದು ಅವನ ಉದ್ದೇಶ. ಆದರೆ, ದಾರಿಯಲ್ಲಿ ಇವರೆಲ್ಲಾ ಒಂದು ಕಾಡುಕಳ್ಳರ ಪಡೆಗೆ ಸಿಲುಕಿ ಸುಮತಿ ಅವರೊಡನೆ ಹೋರಾಡುತ್ತಾ ಮೃತಪಟ್ಟನು. ಕೌಶಿಕೆಯೂ ಮಾಳವಿಕೆಯೂ ಬೇರೆಯಾಗಲು, ಕೌಶಿಕಿ ಸಂನ್ಯಾಸಿನಿಯ ವೇಷದಿಂದ ಧಾರಿಣಿಯ ಆಶ್ರಯವನ್ನು ಪಡೆದಳು ; ಮಾಳವಿಕೆಯನ್ನು ವೀರಸೇನನು ಕಳ್ಳರಿಂದ ಬಿಡಿಸಿಕೊಂಡು ಧಾರಿಣಿಯಲ್ಲಿಗೇ ತಂದು ಬಿಟ್ಟನು; ಕೌಶಿಕಿ ಇದನ್ನು ಕಂಡು ಸುಮ್ಮನಿದ್ದಳು. ಏಕೆಂದರೆ ಒಂದು ಸಿದ್ಧಾದೇಶದ ಪ್ರಕಾರ ಮಾಳವಿಕೆ ಒಂದು ವರ್ಷ ಸೇವಕಳಾಗಿದ್ದು ಅನಂತರ ಅನುರೂಪನಾದ ವರನನ್ನು ಪಡೆಯಬೇಕಾಗಿತ್ತು. ಇದನ್ನು ಕೇಳಿ ಎಲ್ಲರೂ ಆಶ್ಚರ್ಯದಲ್ಲಿ ಮುಳುಗಿರುವಾಗ ಅಗ್ನಿಮಿತ್ರನ ಮಗನಾದ ವಸುಮಿತ್ರನು ತನ್ನತಾತನಾದ ಪುಷ್ಪಮಿತ್ರನ ಯಜ್ಞಾಶ್ವವನ್ನು ಹಿಂಬಾಲಿಸಿ ಹೋಗಿದ್ದು ಜಯಶೀಲನಾದನೆಂದೂ ಪುಷ್ಪಮಿತ್ರನು ಯಜ್ಞದೀಕ್ಷಿತನಾಗಿದ್ದು ಅವರೆಲ್ಲರನ್ನೂ ಎದುರುನೋಡುತ್ತಿದ್ದನೆಂದೂ ವರ್ತಮಾನ ಬರುವುದು. ಧಾರಿಣೀದೇವಿಗೆ ಸಂತೋಷವಾಗಿ, ಆ ಸಂತೋಷಕ್ಕೆ ಸೂಚಕವಾಗಿಯೂ ಮಾಳವಿಕೆಗೆ ತಾನು ಕೊಟ್ಟ ಮಾತನ್ನು ನಡೆಸಿಕೊಡಲೂ ಅವಳನ್ನು ರಾಜನಿಗೆ ಅರ್ಪಿಸುವಳು.

ಹೀಗೆ ಇದು ರಾಜನ ಅಂತಃಪುರದ ಮತ್ತು ಉದ್ಯಾನವನದ ಶೃಂಗಾರ ಪ್ರಪಂಚದಲ್ಲಿ ನಡೆದ ಪ್ರಣಯಕಥೆ. ಇದರಲ್ಲಿ ರಾಜ್ಯವಿಪ್ಲವ ಬಂಧನ ವಿಮೋಚನ ಹೊಡೆದಾಟ ಬಡಿದಾಟ ಜೈತ್ರಯಾತ್ರೆಗಳ ವೀರವೃತ್ತಾಂತವು ಬಂದರೂ ಅದು ರಾಜನ ಕನ್ಯಾಸಂಪಾದನ ವೃತ್ತಾಂತಕ್ಕೆ ಪೋಷಕ, ಗೌಣ ಮತ್ತು ಶ್ರಾವ್ಯ. ಇವುಗಳಿಗಿಂತ ರಂಗದ ಮೇಲೆ ಕಾಮತಂತ್ರ ಸಚಿವನಾದ ವಿದೂಷಕನ ಕುಟಿಲ ಕಾರ್ಯಗಳಿಗೇ ಹೆಚ್ಚು ಪ್ರಾಧಾನ್ಯ. ಅವುಗಳಿಂದಲೇ ಮಾಳವಿಕಾಗ್ನಿಮಿತ್ರರಿಗೆ ಪರಸ್ಪರ ಪರಿಚಯವಾಗಿ ಬೆಳೆದು ಕೊನೆಗೆ ಧಾರಿಣೀದೇವಿಯ ಔದಾರ್ಯದಿಂದ ಫಲಬಿಡುವುದು. ಮಹಾರಾಣಿಯಲ್ಲದಿದ್ದರೂ ಮಾಳವಿಕೆಯೇ ನಾಯಿಕೆ. ನಾಟಕದ ತುಂಬಾ ಅವಳೇ ; ಶಕುಂತಲೆಯ ಪ್ರಾಧಾನ್ಯದಿಂದ 'ಶಾಕುಂತಲ'ವೆಂಬ ಹೆಸರು ಉಚಿತವಾಗುವುದಾದರೆ, ಮಾಳವಿಕಾಗ್ನಿಮಿತ್ರಕ್ಕೆ 'ಮಾಳವಿಕಾ' ಎಂಬ ಹೆಸರು ಇನ್ನೂ ಉಚಿತವೆಂದು ಹೇಳಬಹುದು. ಅವಳಿಗಿರುವಷ್ಟು ಪ್ರಾಧಾನ್ಯ ಅಗ್ನಿ

ಮಿತ್ರನಿಗಿಲ್ಲ; ಸ್ವಪ್ನವಾಸವದತ್ತದಲ್ಲಿ ಉದಯನನು ಹೇಗೋ ಹಾಗೆ ಇಲ್ಲಿ ಅಗ್ನಿಮಿತ್ರನು ಚಿತ್ರಕ್ಕೆ ಭಿತ್ತಿಮಾತ್ರ. ಪ್ರೇಕ್ಷಕರ ಚಿಂತೆ ಗಮನಗಳೆಲ್ಲವೂ ಮಾಳವಿಕೆಯ ಮೇಲೇ ಇರುತ್ತವೆ. ರಾಜನು ಅವಳನ್ನು ಎಷ್ಟು ವರ್ಣಿಸಿದರೂ ಅವನಿಗೆ ತೃಪ್ತಿಯಾಗುವುದಿಲ್ಲ. ಪ್ರಾಯಶಃ ಮತ್ತಾವ ಶೃಂಗಾರ ನಾಟಕದಲ್ಲಿಯೂ ನಾಯಿಕೆಯ ಸೌಂದರ್ಯ ವರ್ಣನೆಗೆ ಇಷ್ಟು ಪದ್ಯಗಳು ವಿನಿಯೋಗಿಸಲ್ಪಟ್ಟಿಲ್ಲ. ಈ ವರ್ಣನೆ ಈಚಿನ ಕಾವ್ಯಗಳ ಸ್ತ್ರೀವರ್ಣನೆಯಂತೆ ಬರಿಯ ಕವಿಸಮಯಾನುಸಾರಿಯಾದ ಶಬ್ದಜಾಲವಲ್ಲ; ರಾಜನ ಅಂತಃಪುರದಲ್ಲಿದ್ದ ಸುಂದರಿಯೂ ಯುವತಿಯೂ ಕಲಾನಿಪುಣೆಯೂ ಆದ ಸ್ತ್ರೀರತ್ನವೊಂದನ್ನು ರಸಿಕನಾದ ಕಾಳಿದಾಸನು ನೋಡಿ ಸಂತೋಷಪಟ್ಟು ಸ್ವಾನುಭವದಿಂದ ಈ ಶ್ಲೋಕಗಳನ್ನು ಬರೆದನೋ ಏನೋ ಎನ್ನಿಸುತ್ತದೆ. ವಿಕ್ರಮೋರ್ವಶೀಯ ಶಾಕುಂತಲಗಳಲ್ಲಿನ ಪ್ರಣಯಸ್ವರೂಪವು ಬೇರೆ. ಒಂದು, ಗಂಧರ್ವಾಪ್ಸರೆಯರ ಅತಿಮಾನುಷಲೋಕ; ಇನ್ನೊಂದು ಋಷ್ಯಾಶ್ರಮದ ಥಾಂದಸ ಪ್ರಪಂಚ. ಉರ್ವಶೀ ಶಕುಂತಲೆಯರಿಬ್ಬರೂ ಋಷಿಪುತ್ರಿಯರು. ಅಲ್ಲಿಯ ವಾತಾವರಣದಲ್ಲಿ ಕಾಣುವ ಪ್ರಣಯವು ಶೃಂಗಾರಕ್ಕೆ ಆವಾಸವಾದ ರಾಜನ ಅಂತಃಪುರದಲ್ಲಿ ಕಾಣುವ ಪ್ರಣಯದಷ್ಟು ಮೋಹಕವಲ್ಲ; ಇಂತಹ ಮಾಳವಿಕೆಯನ್ನು ಕಾಳಿದಾಸನು ಹಿಡಿದು ನಾಟ್ಯವಾಡಿಸುತ್ತಾನೆ; ಅವಳನ್ನು ವಿಧವಿಧವಾದ ವಸ್ತ್ರಾಭರಣಾಲಂಕಾರಗಳಲ್ಲಿ ಪ್ರದರ್ಶಿಸುತ್ತಾನೆ; ಅಂಗಭಂಗಿ ಸೌಂದರ್ಯಗಳನ್ನು ಸೂಚಿಸುತ್ತಾನೆ; ಕುಳಿತಾಗ, ನಿಂತಾಗ, ತಿರುಗಿಕೊಂಡಾಗ, ನಕ್ಕಾಗ, ನಡೆದಾಗ, ಹೂ ಕುಯ್ಯುವಾಗ, ಮುಡಿಯುವಾಗ, ನಮಸ್ಕರಿಸುವಾಗ, ವಿಲಾಸಿನಿಯರ ವಿಲಾಸವು ಎಷ್ಟು ಮೋಹಕವಾಗಿರುವುದೆಂಬುದನ್ನು ವ್ಯಕ್ತಪಡಿಸಲು ಅವಕಾಶವನ್ನು ಕಲ್ಪಿಸಿದ್ದಾನೆ; ಸಂಭ್ರಮ, ಸಂತೋಷ, ನಾಚಿಕೆ, ಹೆದರಿಕೆ, ನಿರೀಕ್ಷೆ ಮುಂತಾದ ನಾನಾ ಭಾವಗಳನ್ನು ಅವಳು ಅಭಿನಯಿಸುವಂತೆ ಘಟನೆಗಳನ್ನು ಕಲ್ಪಿಸಿದ್ದಾನೆ. ಆದ್ದರಿಂದ ಅಭಿನಯದಲ್ಲಿ ಕುಶಲೆಯಾದ ನಟಶ್ರೇಷ್ಠಳು ಈ ಪಾತ್ರವನ್ನು ವಹಿಸುವುದಾದರೆ ಇಂದಿಗೂ ಮಾಳವಿಕಾಗ್ನಿಮಿತ್ರವು ನೋಡುವುದಕ್ಕೆ ಬಹು ಮನೋಹರವಾಗಿರುವುದೆಂದು ಹೇಳಬಹುದು. ಈ ಶೃಂಗಾರ ಸೌಂದರ್ಯಗಳನ್ನು ಅಭಿವ್ಯಕ್ತಿಗೊಳಿಸುವ ನಾಯಿಕೆಗೆ ಒಪ್ಪುವಂತೆ ಕವಿ ಉಚಿತವಾದ ಆವರಣವನ್ನು ಕಲ್ಪಿಸಿದ್ದಾನೆ. ಕಥೆ ನಡೆಯುವುದು ರಾಜನ ಅಂತಃಪುರ; (ಪುಷ್ಪಮಿತ್ರನ ಯಜ್ಞಶಾಲೆಯೂ ವಸುಮಿತ್ರ ಯವನರ ರಣರಂಗವೂ ಅಲ್ಲಿಂದ ಬಹು

ದೂರ; ) ಅಲ್ಲಿ ಒಂದು ಸ್ತ್ರೀ ಮಲೆಯಾಳ; ಪ್ರಮದೋದ್ಯಾನ; ವಸಂತ ಕಾಲದ ಹಸುರು ಹೂಗಳು; ಅವುಗಳ ನಡುವೆ ನವಿಲು, ಪಾರಿವಾಳ ಮುಂತಾದ ಹಕ್ಕಿಗಳು; ಜಲಯಂತ್ರ, ಲತಾಮಂದಿರ, ದೋಲಾಗೃಹ; ಅಲ್ಲಿ ಪತಿಯೊಡನೆ ಉಯ್ಯಾಲೆಯಾಡುವುದಕ್ಕೆಂದು ಬಂದ 'ಮಧು ಮತ್ತೆ'ಯಾದ ಪ್ರೌಢೆ–ಇರಾವತೀ; ಇವುಗಳ ನಡುವೆ ಅಶೋಕವನ್ನು ಅರಳಿಸುವ ವಸಂತ ಲಕ್ಷ್ಮಿಯಂತೆ ಯುವತಿಯೂ ಸುಂದರಿಯೂ ಅವಿವಾಹಿ ತೆಯೂ ನಾಟ್ಯಕಲಾ ನಿಪುಣೆಯೂ, ಆದರೆ ಸಜ್ಜನೆಯೂ ಲಜ್ಜಾ ಪರಿಶೋಭಿ ತೆಯೂ ಆದ ಮಾಳವಿಕೆ; ಗ್ರಹಣ ಹಿಡಿದ ಹುಣ್ಣಿಮೆಯ ಚಂದ್ರನಂತೆ ಸೇವಕಳಾಗಿ ಅಜ್ಞಾತವಾಸದಲ್ಲಿದ್ದ ರಾಜಪುತ್ರಿ. ಅವಳಿಗೆ ಅನುರೂಪರಾದ ಪರಿಚಾರಿಕೆಯರು; ಅವರ ಹೆಸರನ್ನೇ ನೋಡಿ :— ಬಕುಳಾವಳಿಕೆ, ಕೌಮು ದಿಕೆ, ನಿಪುಣಿಕೆ, ಮದನಿಕೆ ಇತ್ಯಾದಿ.

ಇರಾವತಿ ಧಾರಿಣಿಯರಲ್ಲಿ ಪ್ರೌಢಸ್ತ್ರೀಯರ ಶೃಂಗಾರಾಭಿನಯ ವನ್ನು ನೋಡಬಹುದು. ಆದರೆ ಇವರಿವರಲ್ಲಿ ಭೇದವಿದೆ. ಧಾರಿಣಿ ಮಹಾ ದೇವಿ, ಆ ಸ್ಥಾನಕ್ಕೆ ತಕ್ಕ ಗಾಂಭೀರ್ಯ ಔದಾರ್ಯ ಉದಾತ್ತತೆಗಳನ್ನುಳ್ಳವಳು; ಇರಾವತಿ ಪ್ರಾಯಶಃ ಅವಳಿಗಿಂತ ವಯಸ್ಸಿನಲ್ಲಿ ಇನ್ನು ಸ್ವಲ್ಪ ಚಿಕ್ಕವಳು; ಗಾಂಭೀರ್ಯ ಔದಾರ್ಯ ಉದಾತ್ತತೆಗಳಲ್ಲಿಯೂ ಚಿಕ್ಕವಳು; ಪ್ರಮದೆ, ಮತ್ಸರಿ, ಮುಂಗೋಪಿ. ಅವಳ ಸಂತೃಪ್ತಿಗೆಂದೇ ಧಾರಿಣೀದೇವಿ ಮಾಳವಿಕೆ ಯನ್ನು ಬಂಧನದಲ್ಲಿಟ್ಟಳೆಂದು ತೋರುತ್ತದೆ. ವಿದೂಷಕನು ಹಾವು ಕಚ್ಚಿತೆಂದು ಬಂದಾಗ ಹಿಂದು ಮುಂದು ನೋಡದೆ ಭೂತದಯೆ ಪಶ್ಚಾತ್ತಾಪದಿಂದಲೇ ತನ್ನ ಕೈಯಿಂದ ನಾಗಮುದ್ರಿಕೆಯನ್ನು ತೆಗೆದುಕೊಡುವಳು; ಇರಾವತಿಯಾಗಿ ದ್ದರೆ ಹತ್ತು ಸಲ ಯೋಚಿಸುತ್ತಿದ್ದಳೆಂದು ತೋರುತ್ತದೆ. ಮೊದಲನೆಯ ಅಂಕ ದಲ್ಲಿ ಧಾರಿಣಿ ರಾಜನ ತಳತಂತ್ರವನ್ನು ಊಹಿಸಿದ್ದರೂ ನಾಟ್ಯಪ್ರದರ್ಶನವು ಬೇಡಲೇ ಬೇಡವೆಂದು ಹೇಳಲಾರದೆ ದಾಕ್ಷಿಣ್ಯಕ್ಕೆ ಒಪ್ಪುವಳು; ಇರಾವತಿ ಅದನ್ನು ಖಂಡಿಸಿಬಿಡುತ್ತಿದ್ದಳು. ಹೀಗೆ ದರ್ಪ, ಕೋಪ, ಕಾಠಿಣ್ಯ, ದಾಕ್ಷಿಣ್ಯ, ಔದಾರ್ಯ ಗಾಂಭೀರ್ಯಾದಿಗಳನ್ನು ಅಭಿನಯಿಸುವುದಕ್ಕೂ ಈ ನಾಟಕದಲ್ಲಿ ಕವಿ ಅವಕಾಶವನ್ನು ಕಲ್ಪಿಸಿದ್ದಾನೆ. ಆದ್ದರಿಂದ ಇಲ್ಲಿ ಸರ್ವತೋಮುಖವಾದ ಶೃಂಗಾರಾಭಿನಯವನ್ನು ನೋಡಬಹುದು.

ಪುರುಷಪಾತ್ರಗಳಲ್ಲಿ ಅಗ್ನಿಮಿತ್ರ ವಿದೂಷಕರೇ ಮುಖ್ಯ; ಇವರಲ್ಲಿ ವಿದೂಷಕನ ಪಾತ್ರ ಪ್ರದರ್ಶನಕ್ಕೇ ಹೆಚ್ಚು ಅವಕಾಶವಿದೆ; ಅವನ ಹಸಿವು

ದಡ್ಡತನಗಳಿಗಿಂತ ಹಾಸ್ಯ ನೈಪುಣ್ಯ ಚತುರತೆಗಳೇ ಈ ನಾಟಕದಲ್ಲಿ ಹೆಚ್ಚಾಗಿ ವ್ಯಕ್ತಿಗೊಂಡಿವೆ. ರಾಜನು ಧೀರೋದಾತ್ತನಿಗೂ ಧೀರಲಲಿತನಿಗೂ ಮಧ್ಯಸ್ಥನಾಗಿ " ಸೂನೋಪರಿಚರೋ ವಿಹಂಗಮ ಇವಾಮಿಷಲೋಲುಪೋ ಭೀರುಕಶ್ಚ " (ಅಂಕ II) ಎಂಬ ವಿದೂಷಕನ ವರ್ಣನೆಗೆ ಅರ್ಹನಾಗಿದ್ದಾನೆ. ಆದರೆ ಅವನು ಮಂಗಳ ಶ್ಲೋಕದಲ್ಲಿ ವರ್ಣಿತನಾದ 'ಈಶ' ನಂತೆ 'ಪ್ರಣತಬಹುಫಲ' ನಾಗಿದ್ದನೆಂದೂ, ತನ್ನ ಪ್ರಜೆಗಳನ್ನು ತನಗಿಂತಲೂ ಹೆಚ್ಚು ಸುಖದಲ್ಲಿಟ್ಟಿದ್ದನೆಂದೂ, ಅಂತಃಪುರದಲ್ಲಿ ಸ್ತ್ರೀಲೋಲನಾಗಿದ್ದರೂ 'ಅವಿಷಯಮನ'ಸ್ಕನಾದ ಉತ್ತಮ ರಾಜನಾಗಿದ್ದನೆಂದೂ ಕವಿಯ ಆಶಯ ವಿರಬಹುದು ; ದುಷ್ಯಂತನು ಅಂಥವನು. ಆದರೆ ಈ ಅಂಶಕ್ಕೆ ಇಲ್ಲಿ ಅಭಿವ್ಯಕ್ತಿಯಿಲ್ಲ.

ಈ ನಾಟಕವು ಎರಡು ಕಥೆಗಳನ್ನು ಹೆಣೆದು ಮಾಡಿದುದಾಗಿದೆ— ಒಂದು ಗಂಡಿನ ಕಡೆಯ ಕಥೆ, ಇನ್ನೊಂದು ಹೆಣ್ಣಿನ ಕಡೆಯ ಕಥೆ. ಇವು ಗಳನ್ನು ಜೋಡಿಸುವುದರಲ್ಲಿ ಕವಿ ತನ್ನ ಕೌಶಲ್ಯವನ್ನು ತೋರಿಸಿದ್ದಾನೆ. ಮೊದಲನೆಯ ಅಂಕದಲ್ಲಿ ಹರದತ್ತ ಗಣದಾಸರಿಗೆ ವ್ಯಾಜ್ಯವನ್ನು ತಂದು ಹಾಕಿ, ಇಷ್ಟವಿಲ್ಲದಿದ್ದರೂ ಮಹಾರಾಣಿಯ ಕೈಯಲ್ಲೇ ನಾಟ್ಯ ಪ್ರದರ್ಶನಕ್ಕೆ ಅನುಮತಿಯನ್ನು ಕೊಡಿಸಿ, ಮಾಳವಿಕೆಯ ನಾಟ್ಯವಾದ ಮೇಲೆ ಹರದತ್ತನ ಪ್ರದರ್ಶನವನ್ನು ಉಪಾಯದಿಂದ ಮುಂದಕ್ಕೆ ತಳ್ಳಿ ಹಾಕಿಸಿರುವುದರಲ್ಲಿ ಕವಿ ಬಹು ಬುದ್ಧಿವಂತಿಕೆಯನ್ನು ಪ್ರದರ್ಶಿಸಿದ್ದಾನೆ. ನಾಟಕವು ಮೊದಲಾಗು ವುದೂ ಮುಗಿಯುವುದೂ ಆಧುನಿಕ ಕಾದಂಬರಿಯ ಕಥೆಯ ಹಾಗೆ; ಕೌತುಕ ಕಳವಳಗಳಿಂದ ಆರಂಭವಾಗಿ ಅಡ್ಡಿ ಅನುಪಪತ್ತಿಗಳು ಬಂದು, ಕೊನೆಗೆ ತೊಡಕುಗಳೆಲ್ಲಾ ವಿಸ್ಮಯಜನಕವಾದ ರೀತಿಯಲ್ಲಿ ಬಿಟ್ಟು, ಮಂಗಳದಲ್ಲಿ ಮುಗಿಯುತ್ತವೆ. ಕಥಾಪ್ರವಾಹವು ಕೋತಿ, ವೈದ್ಯ, ಕಾಲುನೋವು, ಮಂತಾದವುಗಳಿಂದ ಅನಿರೀಕ್ಷಿತವಾಗಿ ನಿಂತು, ಮತ್ತೆ ಹರಿದು ಬೆಳೆದು ಸುತ್ತಿಕೊಂಡು ಬಂದು ಘಟ್ಟಕ್ಕೆ ಸೇರುತ್ತದೆ.

ಕಥಾಸಂವಿಧಾನದಲ್ಲಿ ಹೇಗೋ ಹಾಗೆಯೇ ಕವಿ ಮಾತು ವಾಕ್ಯ ಪದ್ಯಗಳಲ್ಲಿಯೂ ಆಸಕ್ತಿ ವಹಿಸಿ, ಅವುಗಳನ್ನು ಕಡೆದು ಕೆತ್ತಿ ನಯಗೊಳಿ ಸಿರುವಂತಿದೆ. ಆದ್ದರಿಂದ ಈ ನಾಟಕದಲ್ಲಿ ಹಲವು ವಾಕ್ಯಗಳೂ ಅಭಿಪ್ರಾಯ ಗಳೂ ಶ್ಲೋಕಗಳೂ ಅನುವಾದಕ್ಕೆ ಯೋಗ್ಯವಾಗಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಟ್ಟಿದೆ—

೧. ಹಳೆಯದು—ಹೊಸದು—

ಪುರಾಣಮಿತ್ಯೇವ ನ ಸಾಧು ಸರ್ವಂ
ನ ಚಾಪಿ ಸರ್ವಂ ನವಮಿತ್ಯವದ್ಯಂ।
ಸಂತಃ ಪರೀಕ್ಷ್ಯಾನ್ಯತರದ್ ಭಜಂತೇ
ಮೂಢಃ ಪರಪ್ರತ್ಯಯನೇಯ ಬುದ್ಧಿಃ॥ (ಪ್ರಸ್ತಾವನೆ)

೨. ನಾಟ್ಯದ ಪ್ರಾಶಸ್ತ್ಯ—

ದೇವಾನಾಮಿದಮಾಮನಂತಿ ಮುನಯಃ ಕಾಂತಂ ಕ್ರತುಂ ಚಾಕ್ಷುಷಂ
ರುದ್ರೇಣೇದಮುಮಾಕೃತವ್ಯತಿಕರೇ ಸ್ವಾಂಗೇ ವಿಭಕ್ತಂ ದ್ವಿಧಾ।
ತ್ರೈಗುಣ್ಯೋದ್ಭವಮತ್ರ ಲೋಕಚರಿತಂ ನಾನಾರಸಂ ದೃಶ್ಯತೇ
ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ॥ (I. ೪)

೩. ಪಾತ್ರ ಪ್ರಾಶಸ್ತ್ಯ—

ಪಾತ್ರವಿಶೇಷನ್ಯಸ್ತಂ ಗುಣಾಂತರಂ ವ್ರಜತಿ ಶಿಲ್ಪಮಾಧಾತುಃ।
ಜಲಮಿವ ಸಮುದ್ರಶುಕ್ತೌ ಮುಕ್ತಾಫಲತಾಂ ಪಯೋದಸ್ಯ॥ (I. ೬)

೪. ವಿದ್ಯೆ—ಜೀವಿಕೆ—

ಯಸ್ಯಾಗಮಃ ಕೇವಲಜೀವಿಕಾಯೈ
ತಂ ಜ್ಞಾನಪಣ್ಯಂ ವಣಿಜಂ ವದಂತಿ॥ (I. ೧೭)

೫. ನಾಟ್ಯಾಭಿನಯ—

ಅಂಗೈರಂತರ್ನಿಹಿತವಚನೈಃ ಸೂಚಿತಃ ಸಮ್ಯಗರ್ಥಃ
ಪಾದನ್ಯಾಸೋ ಲಯಮನುಗತಸ್ತನ್ಮಯತ್ವಂ ರಸೇಷು।
ಶಾಖಾಯೋನಿರ್ಮೃದುರಭಿನಯಸ್ತದ್ವಿಕಲ್ಪಾನುವೃತ್ತೌ
ಭಾವೋ ಭಾವಂ ನುದತಿ ವಿಷಯಾದ್ರಾಗಬಂಧಃ ಸ ಏವ॥ (II. ೮)

೬. ಸಪತ್ನೀ ಸ್ನೇಹ—

ಪ್ರತಿಪಕ್ಷೇಣಾಪಿ ಪತಿಂ ಸೇವಂತೇ ಭರ್ತೃವತ್ಸಲಾಃ ಸಾಧ್ವ್ಯಃ।
ಅನ್ಯಸರಿತಾಂ ಶತಾನಿ ಹಿ ಸಮುದ್ರಗಾಃ ಪ್ರಾಪಯಂತ್ಯಬ್ಧಿಂ॥ (V.೧೯)

ಒಟ್ಟಿನ ಮೇಲೆ ಇದರಲ್ಲಿ ಕಾವ್ಯ ನಾಟ್ಯಗಳೆರಡರ ಗುಣಗಳೂ ಇವೆ. ಆದರೂ ಇದು ಕಾಳಿದಾಸನ ರೂಪಕಗಳ ಗೊನೆಯಲ್ಲಿ ಇನ್ನೂ ಸ್ವಲ್ಪ ಹಸುರುಗಾಯಿ; ಬಲಿತು ಬಿರಿದಿರುವ ಹೊಂಬಣ್ಣದ ಹಣ್ಣಲ್ಲ.*

ಎ. ಆರ್. ಕೃಷ್ಣಶಾಸ್ತ್ರೀ

---

* ಸಂಸ್ಕೃತ ನಾಟಕ (ಪುಟಗಳು ೧೨೨—೧೩೪)

# ಮುಖ್ಯ ಪಾತ್ರವರ್ಗ

ಸೂತ್ರಧಾರ

ಪಾರಿಪಾರ್ಶ್ವಕ

| | |
|---|---|
| ರಾಜ : | ಅಗ್ನಿಮಿತ್ರನೆಂಬ ವಿದಿಶೆಯ ದೊರೆ. |
| ವಿದೂಷಕ : | ಗೌತಮನೆಂಬ ಬ್ರಾಹ್ಮಣ, ರಾಜನ ಆಪ್ತಮಿತ್ರ. |
| ಅಮಾತ್ಯ : | ರಾಜನ ವಾಹತಕನೆಂಬ ಮುಖ್ಯಮಂತ್ರಿ. |
| ಗಣದಾಸ : | ಆಸ್ಥಾನದ ಒಬ್ಬ ನಾಟ್ಯಾಚಾರ್ಯ. |
| ಹರದತ್ತ : | ಆಸ್ಥಾನದ ಇನ್ನೊಬ್ಬ ನಾಟ್ಯಾಚಾರ್ಯ. |
| ಕಂಚುಕಿ : | ಮೌದ್ಗಲ್ಯನೆಂಬ ಅರಮನೆಯ ಸೇವಕ. |
| ಮಾಳವಿಕೆ : | ನಾಯಿಕೆ, ಮಾಧವಸೇನನ ತಂಗಿ. |
| ದೇವಿ : | ಅಗ್ನಿಮಿತ್ರನ ಧಾರಿಣಿ ಎಂಬ ಪಟ್ಟದ ರಾಣಿ. |
| ಇರಾವತಿ : | ಅಗ್ನಿಮಿತ್ರನ ಕಿರಿಯ ರಾಣಿ. |
| ಪರಿವ್ರಾಜಿಕೆ : | ಧಾರಿಣಿಯ ಸಮ್ಮುಖದ ಕೌಶಿಕಿ ಎಂಬ ಸಂನ್ಯಾಸಿನಿ. |
| ಪ್ರತೀಹಾರಿ : | ಜಯಸೇನೆ ಎಂಬ ಅರಮನೆಯ ದ್ವಾರಪಾಲಿಕೆ. |
| ಬಕುಳಾವಳಿಕೆ : | ಧಾರಿಣಿಯ ಪರಿಚಾರಿಕೆ, ಮಾಳವಿಕೆಯ ಸಖಿ. |
| ನಿಪುಣಿಕೆ : | ಇರಾವತಿಯ ಪರಿಚಾರಿಕೆ. |
| ಸಮಾಹಿತಿಕೆ : | ಪರಿವ್ರಾಜಿಕೆಯ ಸೇವಕಿ. |
| ಮಧುಕರಿಕೆ : | ಪ್ರಮದವನದ ತೋಟಗಾತಿ. |



# ಕನ್ನಡ ಮಾಳವಿಕಾಗ್ನಿಮಿತ್ರ

## ಮೊದಲನೆಯ ಅಂಕ

ಅನತರ್ಕಳಿಗಮಿತಫಲಗಳನೀಯುವೇಕೈ
ಶ್ವರ್ಯವಿದ್ದರು ಕೃತ್ತಿವಾಸನದಾವನು
ಸತಿಯು ಮೈಯಿರೆಯೆಡೆಯೊಳಾಂತರು ವಿಷಯವಿಮುಸಸ
ರೆನಿಪ ಯತಿಜನರಗ್ರಗಣ್ಯನದಾವನು
ಅಷ್ಟಮೂರ್ತಿಗಳಿಂದೆ ಜಗವನು ಭರಿಪಸದಾರು
ಮತ್ತಿನಭಿಮಾನವನು ತಾಳನದಾವನು
ನೀವು ಸನ್ಮಾರ್ಗವನು ಕಾಂಬವೊಲಾಮಹೇಶನು
ತೊಡೆದು ತೆಗೆಯಲಿ ನಿಮ್ಮ ತಾಮಸ ನಡೆಯನು. ೧

(ನಾಂದಿಯ ಕೊನೆಯಲ್ಲಿ)

ಸೂತ್ರಧಾರ—(ಬಂದು ತೆರೆಯ ಕಡೆ ನೋಡಿ) ಮಾರಿಷ, ಸ್ವಲ್ಪ ಇಲ್ಲಿ ಬಾ.

ಪಾರಿಪಾರ್ಶ್ವಕ—(ಬಂದು) ಭಾವ, ಇದೋ ಬಂದಿದೇನೆ.

ಸೂತ್ರಧಾರ—ಕಾಳಿದಾಸನು ರಚಿಸಿರುವ ಮಾಳವಿಕಾಗ್ನಿಮಿತ್ರವೆಂಬ ನಾಟಕವನ್ನು ಈ ವಸಂತೋತ್ಸವ ಸಮಯದಲ್ಲಿ ಆಡಿತೋರಿಸಬೇಕೆಂದು ವಿದ್ವಾಂಸರ ಸಭೆ ನನಗೆ ಅಪ್ಪಣೆಮಾಡಿದೆ. ಆದ್ದರಿಂದ ಸಂಗೀತವನ್ನು ಆರಂಭಿಸು.

ಪಾರಿಪಾರ್ಶ್ವಕ—ಆಗಡು ಭಾವ, ಆಗಡು. ಸುಪ್ರಸಿದ್ಧರಾದ ಭಾಸ, ಕವಿಪುತ್ರ, ಸೌಮಿಲ್ಲಕ ಮುಂತಾದವರ ನಾಟಕಗಳನ್ನು ಬಿಟ್ಟು ಈಗಿನ ಕವಿಯಾದ ಕಾಳಿದಾಸನ ನಾಟಕವನ್ನು ಇವರು ಹೇಗೆ ತಾನೆ ಗೌರವಿಸುತ್ತಾರೆ ?

ಸೂತ್ರಧಾರ—ನೀನು ಬುದ್ಧಿಯಿಲ್ಲದ ಮಾತನಾಡಿದೆ ; ನೋಡು-

ಹಳತೆಂದಮಾತ್ರದೊಳೆ ಎಲ್ಲವೂ ಒಳಿತಲ್ಲ
ಹೊಸತೆಂದ ಮಾತ್ರದೊಳೆ ಕೃತಿ ಕೆಟ್ಟುದಲ್ಲ
ಪರಿಕಿಸಿದ ಮೇಲೊಂದನೊಲಿದಪರು ಬುಧಜನರು
ಪರರು ಪೇಳ್ದಂದದೊಳು ನಡೆದಪರು ಮೂಢಜನರು. ೨

ಪಾರಿಪಾರ್ಶ್ವಕ—ಸರಿ, ಈ ವಿಷಯದಲ್ಲಿ ಆರ್ಯಮಿಶ್ರರೇ ಪ್ರಮಾಣ.

ಸೂತ್ರಧಾರ— ಹಾಗಾದರೆ ನೀನು ತ್ವರೆಮಾಡು.

ನಡೆಸಲಾಶಿಪೆನಾಹ ನಾನೀಮೊದಲೆ ತಲೆಯೊಳು ತಳೆದ ಪರಿಷದರಾಜ್ಞೆಯ
ದೇವಿ ಧಾರಿಣಿ ಬಳಿಯ ಸೇವಾದಕ್ಷೆ ಭರದೊಳು ಬರುವ ಚೇಟಿಯ ತೆರದೊಳು.

(ಇಬ್ಬರೂ ತೆರಳುವರು.)

## ಇದು ಪ್ರಸ್ತಾವನೆ

---

(ಬಳಿಕ ಚೇಟಿ ಬಕುಳಾವಳಿಕೆ ಬರುವಳು.)

ಬಕುಳಾವಳಿಕೆ—ಹೊಸದಾಗಿ ಕಲಿಯುತ್ತಿರುವ ಚಲಿತ ನಾಟ್ಯದಲ್ಲಿ ಮಾಳವಿಕೆಯ ಅಭ್ಯಾಸ ಹೇಗಿದೆ ಎಂಬುದನ್ನು ನಾಟ್ಯಾಚಾರ್ಯನಾದ ಆರ್ಯ ಗಣದಾಸನನ್ನು ಕೇಳು ಎಂದು ಧಾರಿಣೀದೇವಿ ನನಗೆ ಅಪ್ಪಣೆಮಾಡಿದಾಳೆ. ಅದಕ್ಕಾಗಿ ಸಂಗೀತಶಾಲೆಗೆ ಹೋಗುತ್ತೇನೆ. (ಮುಂದೆ ನಡೆಯುವಳು. ಆ ವೇಳೆಗೆ ಕೈಯ್ಯಲ್ಲಿ ಆಭರಣವೊಂದನ್ನು ತೆಗೆದುಕೊಂಡು ಕೌಮುದಿಕೆ ಎಂಬ ಇನ್ನೊಬ್ಬ ಚೇಟಿ ಬರುವಳು.)

ಬಕುಳಾವಳಿಕೆ—(ಕೌಮುದಿಕೆಯನ್ನು ನೋಡಿ) ಸಖಿ, ಕೌಮುದಿಕೆ, ಇದೇನೆ ನಿನಗೆ ಇಷ್ಟು ಗರ್ವ? ನನ್ನ ಬಳಿಯಲ್ಲಿಯೇ ಹಾದುಹೋಗುತ್ತಿದೀಯೆ, ಆದರೂ ಇತ್ತ ನೋಡದೆಯೇ ಹೋಗುವಿಯಲ್ಲೆ !

ಕೌಮುದಿಕೆ—ಓಹೋ ! ಬಕುಳಾವಳಿಕೆಯೆ ? ಸಖಿ ! ಶಿಲ್ಪಿಯ ಬಳಿಯಿಂದ ಇದೇ ತಾನೆ ತೆಗೆದುಕೊಂಡುಬಂದ ಈ ನಾಗಮುದ್ರೆಯ ಉಂಗುರವನ್ನೇ ನೋಡುತ್ತಿದ್ದು ನಿನ್ನ ಮಾದಲೆಗೆ ಗುರಿಯಾಗಬೇಕಾಯಿತು ಕಣೆ.

ಬಕುಳಾವಳಿಕೆ—(ನೋಡಿ) ಆಹಾ ! ಇಂತಹುದರ ಮೇಲೆ ನಿನ್ನ ನೋಟ

ನೆಟ್ಟಿದ್ದು ನ್ಯಾಯವೇ. ಮೇಲಕ್ಕೆ ಒಡೆದು ಹೊಮ್ಮುತ್ತಿರುವ ಕಿರಣ ಕೇಸರಗಳ ಈ ಉಂಗುರದಿಂದ ನಿನ್ನ ಮುಂಗೈಯೆಲ್ಲ ಕುಸುಮಿಸಿದಂತೆ ಶೋಭಿಸುತ್ತಿದೆ.

ಕೌಮುದಿಕೆ—ಸಖಿ, ಈಗ ನೀನು ಎಲ್ಲಿಗೆ ಹೊರಟಿದೀಯೆ ?

ಬಕುಳಾವಳಿಕೆ—ದೇವಿಯ ಅಪ್ಪಣೆಯಂತೆ, ಹೇಳಿಕೊಟ್ಟಿದ್ದನ್ನು ಕಲಿತುಕೊಳ್ಳುವುದರಲ್ಲಿ ಮಾಳವಿಕೆ ಹೇಗಿರುವಳೆಂದು ಕೇಳಲು ನಾಟ್ಯಾಚಾರ್ಯನಾದ ಆರ್ಯ ಗಣದಾಸನ ಬಳಿಗೆ ಹೋಗುತ್ತಿದೇನೆ.

ಕೌಮುದಿಕೆ—ಸಖಿ ! ಇಂತಹ ಅಭ್ಯಾಸದಲ್ಲಿ ತೊಡಗಿ, ಮಹಾರಾಣಿಯಿಂದ ದೂರವಿದ್ದರೂ ಆಕೆಯನ್ನು ಮಹಾರಾಜನು ನೋಡಿದನಂತಲ್ಲ !

ಬಕುಳಾವಳಿಕೆ - ಹೌದು. ಆಕೆಯನ್ನು ದೇವಿಯ ಪಾರ್ಶ್ವದಲ್ಲಿ ಚಿತ್ರದಲ್ಲಿ ನೋಡಿದನು.

ಕೌಮುದಿಕೆ—ಅದು ಹೇಗೆ ?

ಬಕುಳಾವಳಿಕೆ—ಕೇಳು, ಚಿತ್ರಶಾಲೆಗೆ ದೇವಿ ಹೋಗಿದ್ದಳು. ಆಗ ತಾನೆ ಬಣ್ಣ ಹಾಕಿದ್ದ ಚಿತ್ರವನ್ನು ಆಕೆ ಅಲ್ಲಿ ನೋಡುತ್ತಿದ್ದಳು. ಅದೇ ವೇಳೆಗೆ ಮಹಾರಾಜನೂ ಅಲ್ಲಿಗೆ ಬಂದುಬಿಟ್ಟನು.

ಕೌಮುದಿಕೆ—ಆಮೇಲೆ ?

ಬಕುಳಾವಳಿಕೆ—ಸರಿ, ಉಪಚಾರ ನಡೆಯಿತು. ಮಹಾರಾಜನು ದೇವಿಯೊಂದಿಗೆ ಏಕಾಸನದಲ್ಲಿ ಕುಳಿತನು. ಚಿತ್ರಪಟದಲ್ಲಿ ಪರಿಜನರ ನಡುವೆ ದೇವಿಯ ಬಳಿಯಲ್ಲಿ ಕಾಣುತ್ತಿದ್ದ ಪರಿಚಾರಿಣಿಯೊಬ್ಬಳನ್ನು ನೋಡಿ ದೇವಿಯನ್ನು ಕೇಳಿದನು.

ಕೌಮುದಿಕೆ—ಏನೆಂದು ?

ಬಕುಳಾವಳಿಕೆ—' ದೇವಿ, ನಿನ್ನ ಬಳಿಯಲ್ಲಿ ಚಿತ್ರಿತಳಾಗಿರುವ ಈ ದಾರಿಕೆ ಯಾರೊ ಹೊಸಬಳಂತೆ ತೋರುವಳು. ಈಕೆಯ ಹೆಸರೇನು' ಎಂದು.

ಕೌಮುದಿಕೆ—ಆಕೃತಿವಿಶೇಷಗಳಲ್ಲಿ ಆದರ ಹುಟ್ಟುವುದು ನ್ಯಾಯವೇ ತಾನೆ? ಆಮೇಲೆ ?

ಬಕುಳಾವಳಿಕೆ—ತನ್ನ ಮಾತು ತಿರಸ್ಕೃತವಾದುದನ್ನು ಕಂಡು ಮಹಾರಾಜನು ಶಂಕಿತನಾಗಿ ಮತ್ತೆ ಮತ್ತೆ ದೇವಿಯನ್ನು ಕೇಳತೊಡಗಿ

ದನು. ದೇವಿ ಉತ್ತರಕೊಡದೆ ಸುಮ್ಮನಿದ್ದಾಗ ಕುಮಾರಿ ವಸುಲಕ್ಷ್ಮಿ 'ಭಾವ, ಈಕೆ ಮಾಳವಿಕೆ' ಎಂದುಬಿಟ್ಟಳು.

ಕೌಮುದಿಕೆ—(ಮುಗುಳುನಗೆ ನಕ್ಕು) ಬಾಲಭಾವಕ್ಕೆ ತಕ್ಕದ್ದೇ ತಾನೆ! ಸರಿ. ಆಮೇಲೆ ಏನಾಯಿತು, ಹೇಳು.

ಬಕುಳಾವಳಿಕೆ—ಮತ್ತೇನು? ಈಗ ಮಾಳವಿಕೆ ಮಹಾರಾಜನ ಕಣ್ಣಿಗೆ ಬೀಳದ ಹಾಗೆ ರಕ್ಷಿತಳಾಗಿದ್ದಾಳೆ.

ಕೌಮುದಿಕೆ—ಸರಿ, ನೀನು ನಿನ್ನ ಕೆಲಸಕ್ಕೆ ಹೊರಡು. ನಾನೂ ಈ ಉಂಗುರ ವನ್ನು ತೆಗೆದುಕೊಂಡುಹೋಗಿ ದೇವಿಗೆ ಕೊಡುವೆನು. (ತೆರಳುವಳು)

ಬಕುಳಾವಳಿಕೆ—(ಮುಂದೆ ಹೋಗಿ ನೋಡಿ) ಇದೋ ನಾಟ್ಯಾಚಾರ್ಯನಾದ ಆರ್ಯ ಗಣದಾಸನು ಸಂಗೀತ ಶಾಲೆಯಿಂದ ಈಗ ತಾನೆ ಹೊರಟು ಬರುತ್ತಿದ್ದಾನೆ. ಈಗಲೇ ಇವನ ಬಳಿಗೆ ಹೋಗಿ ಕಾಣಿಸಿಕೊಳ್ಳು ತ್ತೇನೆ. (ಮುಂದೆ ನಡೆಯುವಳು)

ಗಣದಾಸ—(ಪ್ರವೇಶಿಸಿ) ಪ್ರತಿಯೊಬ್ಬನಿಗೂ ಕುಲವಿದ್ಯೆ ಬಹುಮಾನಾಸ್ಪದ ವಾಗಿಯೇ ಇರುತ್ತದೆಯಲ್ಲವೆ? ಆದರೆ ನಾಟ್ಯವಿದ್ಯೆಯಲ್ಲಿ ನಮಗಿರುವ ಗೌರವ ಮಾತ್ರ ಮಿಥ್ಯೆಯಲ್ಲ. ಹೇಗೆಂದರೆ—

ಸುರರ ನಯನಮನೋಹರಕ್ರತುವೆನುವರಿದನಾ ಮುನಿಗಳು  
ತೋರ್ದನೀಶನುಮುಮೆಯನಪ್ಪಿದ ಮೈಯೊಳಿದನಿರ್ತೆರದೊಳು  
ಮೂರು ಗುಣಗಳಿನೊಗೆದ ನಾನಾರಸದ ಲೋಕದ ಚರಿತೆಯು  
ತೋರ್ಪ ನಾಟ್ಯವೆ ಭಿನ್ನರುಚಿಗಳಿಗೇಕಮಾತ್ರಾರಾಧನಾ! ೪

ಬಕುಳಾವಳಿಕೆ—(ಸಮೀಪಿಸಿ) ಆರ್ಯ! ವಂದಿಸುವೆನು.

ಗಣದಾಸ—ಭದ್ರೆ! ಚಿರಂಜೀವಿನಿಯಾಗು.

ಬಕುಳಾವಳಿಕೆ—ಆರ್ಯ, 'ಹೇಳಿಕೊಟ್ಟುದನ್ನು ತಿಳಿದುಕೊಳ್ಳುವುದರಲ್ಲಿ ಶಿಷ್ಯೆ ಮಾಳವಿಕೆ ನಿಮಗೆ ತುಂಬ ತೊಂದರೆ ಕೊಡುತ್ತಿಲ್ಲ ತಾನೆ' ಎಂದು ದೇವಿ ಕೇಳಿದಳು.

ಗಣದಾಸ—ದೇವಿಗೆ ಅರಿಕೆಮಾಡು: 'ಮಾಳವಿಕೆ ಪರಮ ನಿಪುಣೆ, ಮೇಧಾ ವಿನಿ' ಎಂದು. ಹೆಚ್ಚು ಹೇಳುವುದೇನು?

ಆಕೆಗಾವಾವುದನು ಭಾವಿಕವೆಂದು ನಾನಿರದೊಡನೆ ಒರೆಯುವೆನು  
ಬಾಲೆ ಬೋಧಿಪ ತೆರದೊಳೆಸೆವಳು ಮರಳಿ ಭಾವವಿಶೇಷದಿಂದವನು. ೫

ಬಕುಳಾವಳಿಕೆ—(ತನಗೆ ತಾನೆ) ಇರಾವತಿಯನ್ನು ಕೂಡ ಮೀರಿಸುವಳೆಂದು ತೋರುತ್ತದೆ. (ಗಟ್ಟಿಯಾಗಿ) ಗುರುಗಳಾದ ತಾವು ಹೀಗೆ ಸಂತೋಷ ಪಡುತ್ತಿರುವುದರಿಂದ ತಮ್ಮ ಶಿಷ್ಯೆ ಕೃತಾರ್ಥಳೆಂದೇ ಭಾವಿಸಬಹುದು.

ಗಣದಾಸ—ಭದ್ರೆ, ಇಂತಹವರು ದೊರೆಯುವುದು ದುರ್ಲಭವಾದುದರಿಂದ ಕೇಳುತ್ತಿದ್ದೇನೆ: ದೇವಿ ಈ ಪಾತ್ರವನ್ನು ಎಲ್ಲಿಂದ ಬರಮಾಡಿದಳೊ?

ಬಕುಳಾವಳಿಕೆ—ದೇವಿಗೆ ವೀರಸೇನನೆಂಬ ವರ್ಣಾವರನಾದ ಒಡಹುಟ್ಟಿದವನೊಬ್ಬನಿದ್ದಾನೆ. ಮಹಾರಾಜನು ಆತನನ್ನು ನರ್ಮದಾತೀರದ ಗಡಿಯ ದುರ್ಗಕ್ಕೆ ಅಧಿಕಾರಿಯನ್ನಾಗಿ ನೇಮಿಸಿರುವನು. ಶಿಲ್ಪಾಧಿಕಾರಕ್ಕೆ ಯೋಗ್ಯಳಾದಾಳೆಂದು ಬಗೆದು ಆತ ಈ ಹುಡುಗಿಯನ್ನು ತಂಗಿಗೆ ಕಾಣಿಕೆಯಾಗಿ ಕಳುಹಿಸಿಕೊಟ್ಟನು.

ಗಣದಾಸ—(ತನಗೆ ತಾನೆ) ಆಕೃತಿವಿಶೇಷವನ್ನು ನೋಡಿದರೆ ಆಕೆ ಸದ್ವಂಶ ಪ್ರಸೂತಳೆಂದು ತೋರುತ್ತದೆ. (ಗಟ್ಟಿಯಾಗಿ) ಭದ್ರೆ, ನಾನೂ ಈ ಶಿಷ್ಯೆಯಿಂದ ಯಶಸ್ವಿಯಾಗುತ್ತೇನೆ. ನೋಡು—

ಮೆರೆವುದೋಜರ ಶಿಲ್ಪ ಸತ್ಪಾತ್ರದೊಳು ಸಂದಹ ಸಲೆ ಗುಣಾಂತರದೆ
ಕಡಲ ಚಿಪ್ಪಿನೊಳಿಳಿದ ಮುಗಿಲಿನ ಹನಿಯು ಮುತ್ತಾದಂತೆ ತಾಂ ಭರದೆ. ೬

ಬಕುಳಾವಳಿಕೆ—ಆರ್ಯ, ತಮ್ಮ ಶಿಷ್ಯೆ ಈಗ ಎಲ್ಲಿದ್ದಾಳೆ?

ಗಣದಾಸ—ಈಗ ತಾನೆ ಪಂಚಾಂಗಿಕಾಭಿನಯವನ್ನು ಹೇಳಿಕೊಟ್ಟು ಇನ್ನು ನೀನು ವಿಶ್ರಮಿಸಿಕೊ ಎಂದು ತಿಳಿಸಿ ಬಂದೆ. ಕೊಳದ ಇದುರಿನ ಕಿಟಕಿಯಲ್ಲಿ ಆಕೆ ತಂಗಾಳಿಯನ್ನು ಸೇವಿಸುತ್ತಿದ್ದಾಳೆ.

ಬಕುಳಾವಳಿಕೆ—ಹಾಗಾದರೆ ಆಚಾರ್ಯರು ನನಗೆ ಅಪ್ಪಣೆ ಕೊಡಬೇಕು. ಆಕೆಯ ವಿಷಯದಲ್ಲಿ ತಾವು ಎಷ್ಟು ಸಂತೋಷಪಟ್ಟಿರುವಿರೆಂಬುದನ್ನು ಆಕೆಗೆ ತಿಳಿಸಿ ಅವಳ ಉತ್ಸಾಹವನ್ನು ವೃದ್ಧಿಗೊಳಿಸುವೆನು.

ಗಣದಾಸ—ಸರಿ, ನೀನು ನಿನ್ನ ಗೆಳತಿಯನ್ನು ನೋಡಬಹುದು. ಸ್ವಲ್ಪ ಬಿಡುವಿರುವುದರಿಂದ ನಾನೂ ಮನೆಗೆ ಹೋಗುತ್ತೇನೆ.

(ಇಬ್ಬರೂ ತೆರಳುವರು)

**ಇದು ಮಿಶ್ರ ವಿಷ್ಕಂಭಕ**

---

(ಪರಿಜನರು ಒಂದೆಡೆ ನಿಂತಿರುವರು, ಕೈಯಲ್ಲಿ ಪತ್ರವೊಂದನ್ನು ಹಿಡಿದು ಮಂತ್ರಿ ಹಿಂಬಾಲಿಸುತ್ತಿರಲು ಮಹಾರಾಜನು ಪ್ರವೇಶಿಸುವನು.)

ರಾಜ—(ಪತ್ರವನ್ನು ಓದಿದ ಮಂತ್ರಿಯನ್ನು ನೋಡಿ) ವಾಹತಕ, ವೈದರ್ಭನು ಏನು ಮಾಡಬೇಕೆಂದು ನಿರ್ಧರಿಸಿರುವನು?

ಮಂತ್ರಿ—ದೇವ, ಆತ್ಮವಿನಾಶವನ್ನು.

ರಾಜ—ಆತ ಬರೆದು ಕಳುಹಿಸಿರುವ ಉತ್ತರವನ್ನು ಕೇಳಲು ಇಚ್ಛಿಸುತ್ತೇನೆ.

ಅಮಾತ್ಯ—ಆತ ಬರೆದು ಕಳುಹಿಸಿರುವ ಪ್ರತ್ಯುತ್ತರ ಹೀಗಿದೆ: 'ನಿನ್ನ ಚಿಕ್ಕ ತಂದೆಯ ಮಗ ಕುಮಾರ ಮಾಧವಸೇನನು ಸಂಬಂಧವನ್ನು ಬೆಳೆಸುವ ಉದ್ದೇಶದಿಂದ ನಮ್ಮಲ್ಲಿಗೆ ಬರುತ್ತಿರುವಾಗ ಮಾರ್ಗ ಮಧ್ಯದಲ್ಲಿ ನಿನ್ನ ಗಡಿಗಾವಲಿನ ಅಧಿಕಾರಿ ಅವನನ್ನು ಆಕ್ರಮಿಸಿ ಸೆರೆ ಹಿಡಿದಿದ್ದಾನೆ. ಈ ಸಂದರ್ಭದಲ್ಲಿ ನೀನು ನಮ್ಮ ಮೇಲಿನ ಗೌರವ ದಿಂದ ಅವನನ್ನು ಭಾರ್ಯಾ ಸೋದರಿಯರೊಡನೆ ಬಿಡುಗಡೆ ಮಾಡಿ ಕಳುಹಿಸತಕ್ಕದ್ದು' ಎಂದು ಪೂಜ್ಯರಾದ ತಾವು ನನಗೆ ಕಟ್ಟಪ್ಪಣೆ ಮಾಡಿದ್ದೀರಿ. ಆದರೆ ಇಂತಹ ಪ್ರಸಂಗಗಳಲ್ಲಿ ಸಮಾನವಂಶಪ್ರಸೂತ ರಾದ ದೊರೆಗಳು ತಮ್ಮ ಬಂಧುಗಳ ವಿಷಯದಲ್ಲಿ ಹೀಗೆ ನಡೆದು ಕೊಳ್ಳುವರೆಂಬುದನ್ನು ತಾವು ಅರಿಯದವರೇನೂ ಅಲ್ಲ. ಆದ್ದರಿಂದ ಪ್ರಕೃತಸಂದರ್ಭದಲ್ಲಿ ತಾವು ತಟಸ್ಥರಾಗಿರುವುದೇ ಸೂಕ್ತವಾಗಿದೆ. ಮುತ್ತಿಗೆಯ ಗೊಂದಲದಲ್ಲಿ ಅವನ ಸೋದರಿ ಕಾಣೆಯಾಗಿದ್ದಾಳೆ. ಅವಳನ್ನು ಹುಡುಕುವುದಕ್ಕೆ ನಾನು ಸರ್ವ ಪ್ರಯತ್ನವನ್ನೂ ಮಾಡು ತ್ತೇನೆ. ಈಗ ನೀವೇನಾದರೂ ಅವಶ್ಯವಾಗಿ ಮಾಧವಸೇನನ ಬಿಡು ಗಡೆಯನ್ನೇ ಬಯಸುವುದಾದರೆ ಈ ನನ್ನ ನಿಶ್ಚಯವನ್ನು ಕೇಳಬೇಕು—

> ಸೆರೆಯೊಳಿರುವಾ ನನ್ನ ಭಾವನ ಮೌರ್ಯಸಚಿವನ
> ನೀನು ಬಿಡುವೊಡೆ ಮನ್ನಿಸಿ
> ಬಿಡುವೆ ಸೆರೆಯಿಂದಾನುಮೊಡನೆಯೆ ನಿನ್ನ ಮಾಧವ
> ಸೇನನಿವನನು ಕರೆಯಿಸಿ. ೭

ರಾಜ—(ರೋಷದಿಂದ) ಏನು? ಆ ಅನಾತ್ಮಜ್ಞ, ನನ್ನೊಡನೆ ಕಾರ್ಯ ವಿನಿ ಮಯದಿಂದ ವ್ಯವಹರಿಸಲಪೇಕ್ಷಿಸುವನೆ? ವಾಹತಕ, ಸಹಜಶತ್ರು

ವಾದ ಆ ವೈದರ್ಭನು ಈಗ ಪ್ರತಿಕೂಲನೂ ಆಗಿರುವನು. ಆದ್ದರಿಂದ ನಾವು ಹಿಂದೆಯೇ ಸಂಕಲ್ಪಿಸಿದ್ದಂತೆ ಬಹಿರಂಗ ಶತ್ರುವಾಗಿರುವ ಅವನನ್ನು ನಿರ್ಮೂಲಗೊಳಿಸುವಂತೆ ವೀರಸೇನನ ವಶದಲ್ಲಿ ಸಿದ್ಧವಾಗಿರುವ ಸೇನಾಚಕ್ರಕ್ಕೆ ಅಪ್ಪಣೆ ಮಾಡು.

ಅಮಾತ್ಯ—ಅಪ್ಪಣೆ, ಮಹಾಸ್ವಾಮಿ.

ರಾಜ—ಅಥವಾ ಈ ವಿಷಯದಲ್ಲಿ ನಿನ್ನ ಅಭಿಪ್ರಾಯವೇನು ?

ಅಮಾತ್ಯ—ಮಹಾಸ್ವಾಮಿಯವರು ಹೇಳಿದ್ದು ಶಾಸ್ತ್ರಸಮ್ಮತವಾದದ್ದೇ. ಏಕೆಂದರೆ—

ಹೊಸತರೊಳು ದೊರೆತನಕೆ ಬಂದ ಹಗೆ ಜನರೊಲವ
ಗಳಿಸಿ ನೆಲೆನಿಲ್ವ ಮೊದಲವನು
ಅದೆ ತಾನೆ ನೆಟ್ಟಿರುವ ಶಿಥಿಲತರುವೋಲಿಹನು
ಕಿತ್ತೊಗೆಯಲತಿಸುಲಭಸಹನು. ೮

ರಾಜ—ಹಾಗಾದರೆ ರಾಜತಂತ್ರಜ್ಞರ ಮಾತು ವ್ಯರ್ಥವಲ್ಲ. ಈ ಮಾತನ್ನೇ ನಿಮಿತ್ತ ಮಾಡಿಕೊಂಡು ಸೇನಾಪತಿಯನ್ನು ತ್ವರೆಗೊಳಿಸು.

ಅಮಾತ್ಯ—ಅಪ್ಪಣೆ. (ತೆರಳುವನು)

(ಪರಿಜನರು ನೆರೆದು ತಮ್ಮ ತಮ್ಮ ಕಾರ್ಯಗಳಿಗೆ ತಕ್ಕಂತೆ ಮಹಾರಾಜನನ್ನು ಸೇವಿಸುತ್ತಿರುವರು. ವಿದೂಷಕನು ಪ್ರವೇಶಿಸುವನು.)

ವಿದೂಷಕ—'ಗೌತಮ, ಆಕಸ್ಮಿಕವಾಗಿ ಚಿತ್ರಪಟದಲ್ಲಿ ಕಂಡ ಮಾಳವಿಕೆಯನ್ನು ಪ್ರತ್ಯಕ್ಷವಾಗಿ ಕಾಣುವಂತಹ ಯಾವುದಾದರೂ ಒಂದು ಉಪಾಯವನ್ನು ಚಿಂತಿಸು' ಎಂದು ಮಹಾರಾಜನು ನನಗೆ ಅಪ್ಪಣೆ ಮಾಡಿದನು. ನಾನೂ ಒಂದು ತಂತ್ರ ಹೂಡಿದ್ದೇನೆ. ಅದನ್ನು ಆತನಿಗೆ ಅರಿಕೆಮಾಡುತ್ತೇನೆ. (ಮುಂದೆ ನಡೆಯುವನು.)

ರಾಜ—(ವಿದೂಷಕನನ್ನು ನೋಡಿ) ಓಹೊ! ನನಗೆ ಕಾರ್ಯಾಂತರದಲ್ಲಿ ಮತ್ತೊಬ್ಬ ಸಚಿವನಾಗಿರುವ ಇವನು ಈ ಕಡೆಗೇ ಬರುತ್ತಿದ್ದಾನೆ.

ವಿದೂಷಕ—(ಸಮೀಪಿಸಿ) ಮಹಾರಾಜ, ವರ್ಧಿಸು.

ರಾಜ—(ತಲೆದೂಗಿ) ಇಲ್ಲಿ ಕುಳಿತುಕೊ.

(ವಿದೂಷಕ ಕುಳಿತುಕೊಳ್ಳುವನು.)

ರಾಜ—ವಯಸ್ಯ, ನಿನ್ನ ಪ್ರಜ್ಞಾಚಕ್ಷು ಉಪೇಯದಲ್ಲಿ ಉಪಾಯವೇನನ್ನಾದರೂ ಕಂಡಿತೇನು?

ವಿದೂಷಕ—ಪ್ರಯೋಗಸಿದ್ಧಿಯನ್ನು ಕೇಳು.

ರಾಜ—ಅದು ಹೇಗೆ?

ವಿದೂಷಕ—(ಕಿವಿಯಲ್ಲಿ ಉಸುರುತ್ತ) ಅದು ಹೀಗೆ.

ರಾಜ—ಸಾಧು, ವಯಸ್ಯ, ಜಾಣ್ಮೆಯಿಂದ ಆರಂಭಿಸಿದ್ದೀಯೆ. ಈ ಕಾರ್ಯ ಸಿದ್ಧಿಸುವುದು ತುಂಬ ಕಷ್ಟಸಾಧ್ಯವಾದರೂ ನಿನ್ನ ಈ ಆರಂಭದಲ್ಲಿ ನನಗೇನೋ ಭರವಸೆ ಮೂಡುತ್ತಿದೆ. ಏಕೆಂದರೆ—

ಹಲವು ತೊಡರುಗಳರ್ಥವನು ಸಲೆ ಗಳಿಸಲಾರ್ಪನು ಹೆರರ ನೆರವಿರುವಾತನೆ
ಕಣ್ಗಳಿದ್ದರು ಕತ್ತಲೆಡೆಯೊಳು ದೀಪರಹಿತನು ದೃಶ್ಯವನು ತಾ ಕಾಂಬನೆ! ೯

(ತೆರೆಯಲ್ಲಿ)

"ಸಾಕು, ಸಾಕು, ಹೆಚ್ಚು ಗಳಹಬೇಡ. ಮಹಾರಾಜರ ಇದಿರಿನಲ್ಲಿಯೇ ನಮ್ಮಿಬ್ಬರಲ್ಲಿ ಯಾರು ಕಡಿಮೆ ಯಾರು ಹೆಚ್ಚು ಎನ್ನುವುದು ವ್ಯಕ್ತವಾಗಿ ಹೋಗುತ್ತದೆ."

ರಾಜ—ಸಖ, ಆ ನಿನ್ನ ಸುನೀತಿವೃಕ್ಷ ಹೂ ಬಿಟ್ಟಂತಿದೆ.

ವಿದೂಷಕ—ಬೇಗನೆ ಹಣ್ಣನ್ನೂ ಕಾಣುವೆ.

(ಬಳಿಕ ಕಂಚುಕಿ ಪ್ರವೇಶಿಸುವನು.)

ಕಂಚುಕಿ—ಮಹಾರಾಜ, ಪ್ರಭುವಿನ ಆಜ್ಞೆಯನ್ನು ನಡಸಿರುವುದಾಗಿ ಅಮಾತ್ಯನು ಬಿನ್ನವಿಸುತ್ತಿರುವನು. ಇತ್ತ ಹರದತ್ತ ಗಣದಾಸರು;

ಅಭಿನಯಾಚಾರ್ಯರಿವರಿರ್ವರು ಪರಸ್ಪರಜಯೋದ್ಯತರು ಬಂದು
ನೋಡಲೆಳಸಿರ್ದರಿದೊ ಪ್ರೈವೆತ್ತಭಾವದ್ವಯಂಗಳೆನಲಿಂದು. ೧೦

ರಾಜ—ಅವರಿಬ್ಬರನ್ನೂ ಒಳಕ್ಕೆ ಬರಮಾಡು.

ಕಂಚುಕಿ—ಅಪ್ಪಣೆ, ಮಹಾಸ್ವಾಮಿ. (ತೆರಳಿ ಮತ್ತೆ ಅವರಿಬ್ಬರೊಡನೆ ಮರಳಿ) ಪೂಜ್ಯರು, ಹೀಗೆ, ಹೀಗೆ ದಯಮಾಡಿಸಬೇಕು.

ಹರದತ್ತ—(ರಾಜನನ್ನು ನೋಡಿ) ಆಹಾ! ರಾಜಮಹಿಮೆ ಸಹಿಸಲಸಾಧ್ಯವಾದದ್ದು. ಹಾಗೆಯೇ ಸರಿ—

ಅಪರಿಚಿತನಿವನಲ್ಲ ಮೇಣರವ್ಯನುಮಲ್ಲ ಆದರೂ ಬಳಿಗೈದಲದುರುತಿಹೆನು
ಕಡಲಪೊಲು ಚಣಚಣಕೆ ದೊರೆಯಿವನು ಹೊಸಹೊಸತು ಪಾಂಗಿನೊಳು
ಕಣ್ಗೆಸೆಯುತಿಹನು. ೧೧

ಗಣದಾಸ—ಪುರುಷಾಕೃತಿಯಿಂದಿರುವ ಈ ತೇಜಸ್ಸು ಮಹತ್ತರವಾದದ್ದು. ಹಾಗೆಯೇ ಸರಿ.

ಅಲ್ಲಿ ಬಾಗಿಲ ವಹರೆಯುವರನುವುತಿಯು ಪಡೆದೊಳಪೊಕ್ಕೆನು
ಇಲ್ಲಿ ಸಿಂಹಾಸನವ ಚಾರನ ಕೂಡಿ ಮುಂದಡಿಯಿಡುವೆನು
ಆದರೂ ಈ ದಿಟ್ಟಿಕೋರ್‍ವೈಪಿವನ ತೇಜದ ಇದಿರೊಳು
ನುಡಿಗಳಿಲ್ಲದೆ ನಾಂ ನಿವಾರಿತನಾದೆನಾಹಾ ಭರದೊಳು. ೧೨

ಕಂಚುಕಿ—ಇದೊ ಮಹಾರಾಜನು, ಬಳಿಗೆ ಸಾರಿ.

ಇಬ್ಬರೂ—(ರಾಜನ ಬಳಿಗೈದಿ) ಮಹಾರಾಜನಿಗೆ ಜಯವಾಗಲಿ.

ರಾಜ—ಪೂಜ್ಯರಿಬ್ಬರಿಗೂ ಸ್ವಾಗತ. (ಪರಿಜನರನ್ನು ನೋಡಿ) ಈ ಮಹನೀಯರಿಬ್ಬರಿಗೂ ಪೀಠಗಳನ್ನು ತನ್ನಿ.

(ಇಬ್ಬರೂ ಪರಿಜನರು ತಂದಿಟ್ಟ ಪೀಠಗಳಲ್ಲಿ ಕುಳಿತುಕೊಳ್ಳುವರು.)

ರಾಜ—ಇದೇನು! ಶಿಷ್ಯೆಯರಿಗೆ ಉಪದೇಶಮಾಡಬೇಕಾದ ಕಾಲದಲ್ಲಿ ತಾವಿಬ್ಬರೂ ಇಲ್ಲಿಗೆ ಒಂದೇ ಬಾರಿಗೆ ದಯಮಾಡಿರುವಿರಲ್ಲ!

ಗಣದಾಸ—ಮಹಾಸ್ವಾಮಿಯವರು ಕೇಳಬೇಕು. ನಾನು ಸದ್ಗುರುವಿನಿಂದಲೇ ಅಭಿನಯ ವಿದ್ಯೆಯಲ್ಲಿ ಶಿಕ್ಷಿತನಾದವನು. ಪ್ರಯೋಗ ಪ್ರದರ್ಶನವನ್ನೂ ಮಾಡಿರುತ್ತೇನೆ. ಮಹಾಸ್ವಾಮಿಯವರು ನನ್ನನ್ನು ಆದರಿಸಿರುವಿರಿ. ಮಹಾರಾಣಿಯವರೂ ಆದರಿಸಿರುವರು.

ರಾಜ—ಚೆನ್ನಾಗಿ ಬಲ್ಲೆ. ಮುಂದೇನು?

ಗಣದಾಸ—ಇಂಥ ನನ್ನನ್ನು ಈ ಹರದತ್ತನು ಪ್ರಧಾನ ಪುರುಷರ ಸಮಕ್ಷದಲ್ಲಿ 'ಇವನು ನನ್ನ ಕಾಲ ದೂಳಿಗೂ ಸಮನಲ್ಲ' ಎಂದು ಅವಮಾನ ಮಾಡಿದ್ದಾನೆ.

ಹರದತ್ತ—ದೇವ, ಇವನೇ ನನ್ನನ್ನು ಮೊದಲು ಹಂಗಿಸಿದವನು. 'ನನಗೂ ನಿನಗೂ ಸಮುದ್ರಕ್ಕೂ ಹಳ್ಳಕ್ಕೂ ಇರುವಷ್ಟು ಅಂತರ' ಎಂದನು. ಆದ್ದರಿಂದ ಈಗ ತಾವೇ ಈತನನ್ನೂ ನನ್ನನ್ನೂ ಶಾಸ್ತ್ರದಲ್ಲಿಯೂ

ಪ್ರಯೋಗದಲ್ಲಿಯೂ ಪರೀಕ್ಷೆ ಮಾಡಬೇಕು. ನಮ್ಮಿಬ್ಬರಿಗೂ ಮಹಾಸ್ವಾಮಿಯವರೇ ವಿಶೇಷಜ್ಞರಾದ ಪರೀಕ್ಷಕರು.

ವಿದೂಷಕ—ಪ್ರತಿಜ್ಞೆ ಚೆನ್ನಾಗಿದೆ.

ಗಣದಾಸ—ಇದು ಮೊದಲು ಮಾಡತಕ್ಕದ್ದು. ಮಹಾಸ್ವಾಮಿಯವರು ಅವಹಿತ ಚಿತ್ತರಾಗಿ ಕೇಳಬೇಕು.

ರಾಜ—ಸ್ವಲ್ಪ ತಾಳಿ. ಈ ವಿಷಯದಲ್ಲಿ ಪಕ್ಷಪಾತ ನಡೆದೀತೆಂದು ದೇವಿ ಭಾವಿಸಿಯಾಳು. ಆದ್ದರಿಂದ ಪಂಡಿತ ಕೌಶಿಕೆಯೊಡಗೂಡಿರುವ ದೇವಿಯ ಎದುರಿನಲ್ಲಿಯೇ ಈ ವ್ಯವಹಾರ ನಡೆಯುವುದು ನ್ಯಾಯ.

ವಿದೂಷಕ—ಸರಿಯಾಗಿ ಹೇಳಿದೆ.

ಆಚಾರ್ಯರು—ಮಹಾಸ್ವಾಮಿಯವರ ಇಷ್ಟ.

ರಾಜ—ಮೌದ್ಗಲ್ಯ, ಈ ಪ್ರಸ್ತಾಪವನ್ನು ಅರಿಕೆ ಮಾಡಿ ಪಂಡಿತ ಕೌಶಿಕಿಯೊಡನೆ ದೇವಿಯನ್ನು ಕರೆದುಕೊಂಡು ಬಾ. (ತೆರಳಿ ಮತ್ತೆ ದೇವಿಯೊಡನೆಯೂ ಪರಿವ್ರಾಜಿಕೆಯೊಡನೆಯೂ ಮರಳಿ)

ದೇವಿಯವರು ಹೀಗೆ ಬಿಜಮಾಡಿಸಬೇಕು, ಹೀಗೆ ಬಿಜಮಾಡಿಸಬೇಕು.

ದೇವಿ—(ಪರಿವ್ರಾಜಿಕೆಯನ್ನು ನೋಡಿ) ಭಗವತಿ! ಹರದತ್ತ ಗಣದಾಸರ ಕಲಹ ನಿನಗೆ ಹೇಗೆ ತೋರುತ್ತದೆ?

ಪರಿವ್ರಾಜಿಕೆ—ನಮ್ಮ ಪಕ್ಷಕ್ಕೆ ಸೋಲಾಗುವುದೆಂಬ ಶಂಕೆ ಬೇಡ. ಗಣದಾಸ ಎದುರಾಳಿಗೆ ಸೋಲುವವನಲ್ಲ.

ದೇವಿ—ಹಾಗಿದ್ದರೂ ರಾಜನು ಕೈಹಿಡಿದಿರುವುದರಿಂದ ಹರದತ್ತನಿಗೆ ಪ್ರಾಮುಖ್ಯತೆ ಬರಬಹುದು.

ಪರಿವ್ರಾಜಿಕೆ—ಎಲೌ, ರಾಜ್ಞಿಯೆಂಬ ಶಬ್ದಕ್ಕೆ ನೀನೂ ಪಾತ್ರಳಾಗಿರುವೆಯೆಂಬುದನ್ನು ಸ್ವಲ್ಪ ಮನಸ್ಸಿಗೆ ತಂದುಕೊಂಡೆಯಾ;

ರವಿಯ ನೆರವಿನೊಳಗ್ನಿಯತಿಭಾಸುರತೆಯ ತಾಂ ಧರಿಸಿದಪನೆನಲು
ಮಹಿಮಾತಿಶಯವ ದಲ್ ಚಂದಿರನುಮಾಂತಪನು ಕೈವಿಡಿಯಲಿರುಳು. ೧೩

ವಿದೂಷಕ—ವಯಸ್ಯ, ನೋಡು ನೋಡು, ಪೀಠಮರ್ದಿಕೆಯಾದ ಪಂಡಿತ ಕೌಶಿಕಿಯೊಡನೆ ಧಾರಿಣೀದೇವಿ ಬರುತ್ತಿದ್ದಾಳೆ.

ರಾಜ—ನೋಡುತ್ತಿದ್ದೇನೆ.

ಯತಿವೇಷವಾಂತಿರುವ ಕೌಶಿಕಿಯನೊಡವೆರೆದು
ಮಂಗಳಾಕೃತಳು ಬರುತಿರುವಳಹುದು
ಅಧ್ಯಾತ್ಮವಿದ್ಯೆಯನು ಕೂಡಿಕೊಂಡೊಡವೆರೆದು
ತ್ರೈವಿದ್ಯೆ ಮೈತಳೆದು ಬರುವ ತೆರನಿಹುದು. ೧೪

ಪರಿವ್ರಾಜಿಕೆ—(ಸಮೀಪಿಸಿ) ದೇವನಿಗೆ ಜಯವಾಗಲಿ.

ರಾಜ—ಭಗವತಿ, ನಿನಗೆ ನಮಸ್ಕರಿಸುತ್ತೇನೆ.

ಪರಿವ್ರಾಜಿಕೆ—

ಶರದ ನೂರ್ವರವೇರಿಯನಾಗಿಸು ಧಾರಿಣಿಯ ಮೇಣ್ ಭೂತಧಾರಿಣಿಯ
ಮೆರೆಯುತಿರುವೀ ಪರಮಸಾರಪ್ರಸವತೆಯ ಮೇಣೆಣೆಯ ಸ್ಮರಣೆಯ. ೧೫

ದೇವಿ—ಆರ್ಯಪುತ್ರನಿಗೆ ಜಯವಾಗಲಿ.

ರಾಜ—ದೇವಿಗೆ ಸ್ವಾಗತ (ಪರಿವ್ರಾಜಿಕೆಯನ್ನು ನೋಡಿ) ಭಗವತಿ, ಪೀಠವನ್ನು ಪರಿಗ್ರಹಿಸಬೇಕು.

(ಎಲ್ಲರೂ ಅವರವರಿಗೆ ತಕ್ಕ ಆಸನದಲ್ಲಿ ಕುಳಿತುಕೊಳ್ಳುವರು.)

ರಾಜ—ಭಗವತಿ, ಹರದಾಸ ಗಣದಾಸರಲ್ಲಿ ಪರಸ್ಪರವಾಗಿ ವಿಜ್ಞಾನಸಂಬಂಧವಾದ ಘರ್ಷಣೆಯೊಂದು ಪ್ರಾಪ್ತವಾಗಿದೆ. ಆದ್ದರಿಂದ ಪೂಜ್ಯಳಾದ ನೀನು ಈಗ ಪರೀಕ್ಷಕತ್ವವನ್ನು ವಹಿಸಬೇಕಾಗಿದೆ.

ಪರಿವ್ರಾಜಿಕೆ—(ನಸುನಕ್ಕು) ಈ ಪರಿಹಾಸ ಸಾಕು. ಪಟ್ಟಣ ಸಮೀಪದಲ್ಲಿರುವಾಗ ಹಳ್ಳಿಯಲ್ಲಿಯೇ ರತ್ನಪರೀಕ್ಷೆ ?

ರಾಜ—ಹಾಗೆ ಹೇಳಬೇಡ. ಪಂಡಿತಕೌಶಿಕಿ ಪೂಜ್ಯಳಲ್ಲವೆ ? ಈ ಆಚಾರ್ಯರಿಬ್ಬರ ವಿಷಯದಲ್ಲಿ ನಾನಾಗಲಿ ದೇವಿಯಾಗಲಿ ಪಕ್ಷಪಾತವುಳ್ಳವರೇ ಸರಿ.

ಆಚಾರ್ಯರಿಬ್ಬರೂ—ಮಹಾಪ್ರಭುಗಳು ಹೇಳಿದ್ದು ನ್ಯಾಯ. ನಮ್ಮ ಗುಣದೋಷಗಳ ನಿರ್ಣಯಕ್ಕೆ ನಿಷ್ಪಕ್ಷಪಾತಳಾಗಿರುವ ಈಕೆಯೇ ಮಧ್ಯಸ್ಥಳಾಗಿರುವುದಕ್ಕೆ ತಕ್ಕವಳು.

ರಾಜ—ಸರಿ ಹಾಗಾದರೆ. ವಿವಾದ ಪ್ರಾರಂಭವಾಗಲಿ.

ಪರಿವ್ರಾಜಿಕೆ—ದೇವ, ನಾಟ್ಯಶಾಸ್ತ್ರ ಪ್ರಯೋಗಪ್ರಧಾನವಾದುದು. ಹೀಗಿರುವಾಗ ಕೇವಲ ವಾಗ್ವ್ಯವಹಾರದಿಂದ ಏನು ಪ್ರಯೋಜನ ?

ರಾಜ—ಈ ವಿಷಯದಲ್ಲಿ ದೇವಿಯ ಅಭಿಪ್ರಾಯ ಹೇಗಿದೆಯೋ ?

ದೇವಿ—ನನ್ನ ಮಟ್ಟಿಗೆ ಹೇಳುವುದಾದರೆ ಇವರಿಬ್ಬರ ಪರಸ್ಪರ ವಿವಾದವೇ ನನಗೆ ರುಚಿಸುವುದಿಲ್ಲ.

ಗಣದಾಸ—ವಿದ್ಯೆಯಲ್ಲಿ ಸಮಾನಸ್ಕಂಧನಿಂದ ನಾನು ಅವಮಾನಿತನಾದೇನೆಂದು ದೇವಿಯರು ಭಾವಿಸಬಾರದು.

ವಿದೂಷಕ—ಈ ಟಗರುಗಾಳಗವನ್ನು ಸ್ವಲ್ಪ ನೋಡೋಣ. ಇವರಿಗೆ ವೃಥಾ ಸಂಬಳ ಕೊಡುವುದೇಕೆ ?

ದೇವಿ—ಕಲಹಪ್ರಿಯನಲ್ಲವೆ ನೀನು ?

ವಿದೂಷಕ—ಹಾಗಲ್ಲ, ಮದಿಸಿದ ಎರಡು ಆನೆಗಳು ತಮ್ಮತಮ್ಮಲ್ಲಿ ಹೋರಾಡುತ್ತಿರುವಾಗ ಅವುಗಳಲ್ಲಿ ಒಂದು ಸೋತ ಹೊರತು ಶಾಂತಿ ಎಲ್ಲಿ ಬಂತು ?

ರಾಜ—ಭಗವತಿ, ನೀವು ಇವರಿಬ್ಬರ ಅಂಗಸೌಷ್ಠವಾಭಿನಯವನ್ನು ನೋಡಿರುವೆಯಷ್ಟೆ.

ಪರಿವ್ರಾಜಿಕೆ—ಹೌದು, ಈಗ ಆ ಮಾತೇಕೆ ?

ರಾಜ—ಹಾಗಾದರೆ ಇವರು ಇನ್ನೇನು ಬೇರೆ ರುಜುವಾತು ತರಬೇಕು ?

ಪರಿವ್ರಾಜಿಕೆ—ಅದನ್ನೇ ಈಗ ಹೇಳಬಯಸುತ್ತೇನೆ.

ಕೆಲರು ತಮ್ಮಂಗದೊಳು ತೋರ್ಪರು ಸುಷ್ಠುವೆನಿಸಿರುವಭಿನಯಂಗಳನು
ಕೆಲರು ಅನ್ಯರಿಗೊರೆವ ಪದದೊಳು ವಿಶಿವರತಿಶಯ ಕೌಶಲಂಗಳನು
ಆರು ತಾನೀ ಉಭಯ ಗುಣದೊಳುಮಗ್ರನವನೆಯೆ ಶಿಕ್ಷಕೋತ್ತಮನು. ೧೬

ವಿದೂಷಕ—ಆರ್ಯರಿಬ್ಬರೂ ಈ ಪೂಜ್ಯೆಯ ಮಾತನ್ನು ಕೇಳಿದಿರಷ್ಟೆ. ಉಪದೇಶದರ್ಶನದಿಂದಲೇ ನಿರ್ಣಯ ಎಂಬುದು ಇದರ ಸಾರಾಂಶ.

ಹರದತ್ತ—ನಮಗಿದೇ ತುಂಬ ಒಪ್ಪಿಗೆಯಾಗಿದೆ.

ಗಣದಾಸ—ದೇವಿ, ಇದು ಇಲ್ಲಿಗೆ ಬಂತು.

ದೇವಿ—ಆದರೆ ಮಂದಮತಿಯಾದ ಶಿಷ್ಯಳು ಉಪದೇಶವನ್ನು ಮಲಿನಗೊಳಿಸಿದರೆ ಅದು ಆಚಾರ್ಯನ ದೋಷವೆ ?

ರಾಜ—ದೇವಿ, ಅದು ಹಾಗೆಯೇ ಆಗುತ್ತದೆ.

ಗಣದಾಸ—ಯೋಗ್ಯಳಲ್ಲದವಳನ್ನು ಶಿಷ್ಯಳನ್ನಾಗಿ ಸ್ವೀಕರಿಸುವುದು ಕೂಡ

ಆಚಾರ್ಯನ ಬುದ್ಧಿಲಾಘವವನ್ನು ಪ್ರಕಾಶಪಡಿಸುತ್ತದೆ.

ದೇವಿ—(ತನಗೆ ತಾನೆ) ಈಗೇನು ಮಾಡಲಿ? (ಗಣದಾಸನನ್ನು ನೋಡಿ ಮರೆಯಲ್ಲಿ) ಆರ್ಯಪುತ್ರನ ಉತ್ಸಾಹಕ್ಕೆ ಕಾರಣವಾದ ಮನೋರಥವನ್ನು ಪೂರೈಸುವ ಪ್ರಯತ್ನ ಇನ್ನು ಸಾಕು. (ಗಟ್ಟಿಯಾಗಿ) ಈ ನಿರರ್ಥಕವಾದ ಪ್ರಯತ್ನವನ್ನು ಬಿಟ್ಟುಬಿಡಿ.

ವಿದೂಷಕ—ದೇವಿಯವರು ಸರಿಯಾಗಿ ಹೇಳಿದರು. ಅಯ್ಯಾ ಗಣದಾಸ, ಸಂಗೀತೋಪದೇಶದ ವ್ಯಾಜದಿಂದ ಸರಸ್ವತಿಗೆ ಸಮರ್ಪಿಸಿದ ಕಡುಬುಗಳನ್ನು ಮೆಲ್ಲುತ್ತಿರುವ ನಿನಗೆ ಸೋಲಿನ ಭಯವಿರುವ ಈ ವಿವಾದದಿಂದೇನು?

ಗಣದಾಸ—ನಿಜ. ದೇವಿಯವರ ಮಾತಿಗೆ ಅದೇ ಅರ್ಥ. ಸಮಯೋಚಿತವಾಗಿರುವ ತತ್ಕಾಲಪ್ರೇರಿತವಾದ ಈ ನನ್ನ ಮಾತನ್ನು ಕೇಳಿ:

ಪದವಿ ದೊರಕಿದುದೆಂದು ವಾದಕೆ ಬೆದರಿ ಸುಮ್ಮನೆ
ಅನ್ಯರವಹೇಳನವನೆಲ್ಲವ ಸಹಿಸುತೆ
ಬರಿಯ ಜೀವಿಕೆಗೆಂದೆ ವಿದ್ಯೆಯನೊರೆಯುವವರನು
ಅರಿವು ಮಾರುವ ವರದ ಮಾತ್ರನು ಎನುವರು. ೧೭

ದೇವಿ—ನಿಮ್ಮ ಶಿಷ್ಯಳು ನಿಮ್ಮ ಬಳಿ ಬಂದು ಕೆಲವೇ ದಿನವಾಯಿತು. ಉಪದೇಶ ಚೆನ್ನಾಗಿ ನಾಟದಿರುವಾಗ ಅದನ್ನು ಪ್ರದರ್ಶಿಸುವುದು ನ್ಯಾಯ ಸಮ್ಮತವಲ್ಲ.

ಗಣದಾಸ—ಆದುದರಿಂದಲೇ ನಾನು ನಿರ್ಬಂಧಪಡಿಸುತ್ತಿರುವುದು.

ದೇವಿ—ಸರಿ, ಹಾಗಾದರೆ ನೀವಿಬ್ಬರೂ ನಿಮ್ಮ ಉಪದೇಶವನ್ನು ಈ ಪೂಜ್ಯಳೊಬ್ಬಳ ಮುಂದೆಯೇ ಪ್ರದರ್ಶಿಸಿ.

ಪರಿವ್ರಾಜಿಕೆ—ದೇವಿ ಇದು ಸಾಧುವಾಗಲಾರದು. ಸರ್ವಜ್ಞನಾದರೂ ಒಬ್ಬನೇ ನಿರ್ಣಯಿಸುವುದು ದೋಷವಾದೀತು.

ದೇವಿ—(ತನಗೆ ತಾನೆ) ಮುಗ್ಧೆ, ಏನು! (ಸಿಡುಕಿನಿಂದ ಮೊಗದಿರುಹುವಳು.) ಎಚ್ಚರವಿದ್ದೂ ನನ್ನನ್ನು ನಿದ್ರಿಸುತ್ತಿರುವಳೆಂದು ತಿಳಿದಿರುವೆಯಾ?

ಪರಿವ್ರಾಜಿಕೆ—(ನೋಡಿ)

ಪತಿಯಿಂದೆ ಮೊಗದಿರುಹಲಿಂತೇತಕನಿಮಿತ್ತಮೇಲೆಯಿಂದುವದನೆ
ದಯಿತೆಯರು ಸವ್ಯಾಜಕುಪಿತೆಯರು ಒಡೆತನವನಾಂತುಮೋಪಪೊಳು. ೧೮

ವಿದೂಷಕ—ವ್ಯಾಜವಿಲ್ಲವೆ? ಸ್ವಪಕ್ಷ ರಕ್ಷಣೆಯೇ ವ್ಯಾಜ. (ಗಣದಾಸನನ್ನು ನೋಡಿ) ಅದೃಷ್ಟಶಾಲಿಯಾದ ನೀನು ದೇವಿಯ ಕೋಪದ ವ್ಯಾಜದಿಂದ ರಕ್ಷಿತನಾದೆ. ಸುಶಿಕ್ಷಿತರಾಗಿದ್ದರೂ ಎಲ್ಲರೂ ಉಪದೇಶದರ್ಶನದಲ್ಲಿ ನಿಪುಣರಾಗುವುದಿಲ್ಲ.

ಗಣದಾಸ—ದೇವಿಯರು ಕೇಳಬೇಕು. ಜನ ಹೀಗೆಯೇ ಅಂದುಕೊಳ್ಳುತ್ತಾರೆ. ಆದ್ದರಿಂದ,

ನಾಟ್ಯದುಪದೇಶದೊಳು ನನಗಿರುವ ಜಾಣ್ಮೆಯನು
ತೋರಲೆಂದೆಳಸಿದರುಮಿಂದು
ನೀವು ನನಗನುಮತಿಯನೀಯದಿರಲರಿಯುವೆನು
ಕೈಬಿಟ್ಟಿರೆನ್ನನಿಂತೆಂದು. ೧೯

(ಪೀಠದಿಂದ ಏಳತೆಳಸುವನು)

ದೇವಿ—(ತನಗೆ ತಾನೆ) ಇನ್ನೇನು! (ಗಟ್ಟಿಯಾಗಿ) ಶಿಷ್ಯಜನರಲ್ಲಿ ಆಚಾರ್ಯರಿಗೇ ಪರಮಾಧಿಕಾರ.

ಗಣದಾಸ—ಅಸ್ಥಾನದಲ್ಲಿ ಬಹುಕಾಲ ಶಂಕೆಗೊಂಡೆ. (ರಾಜನನ್ನು ನೋಡಿ) ದೇವಿಯವರು ಅನುಮತಿಯಿತ್ತರು. ಯಾವ ಅಭಿನೇಯ ವಸ್ತುವಿನಲ್ಲಿ ಉಪದೇಶ ಪ್ರದರ್ಶಿತವಾಗಬೇಕೆಂಬುದನ್ನು ಕುರಿತು ಮಹಾಸ್ವಾಮಿಯವರು ಆಜ್ಞಾಪಿಸಬೇಕು.

ರಾಜ—ಈ ಪೂಜ್ಯಳು ಆಜ್ಞೆಮಾಡಿದಂತೆ ಆಗಲಿ.

ಪರಿವ್ರಾಜಿಕೆ—ದೇವಿಯ ಮನಸ್ಸಿನಲ್ಲಿ ಏನೋ ಇದೆ. ಆದ್ದರಿಂದ ಶಂಕಿಸುತ್ತಿದೇನೆ.

ದೇವಿ—ಹೆದರದೆ ಹೇಳು. ಪರಿಜನರ ಮೇಲೆ ನನಗೆ ಒಡೆತನ ಇದ್ದೇ ಇದೆಯಲ್ಲವೆ?

ರಾಜ—ನನ್ನ ಮೇಲೂ ಎಂದು ಹೇಳು.

ದೇವಿ—ಭಗವತಿ, ಈಗ ಹೇಳು.

ಪರಿವ್ರಾಜಿಕೆ—ನಾಲ್ಕು ಖಂಡಗಳ ಚಲಿತನಾಟ್ಯಪ್ರಯೋಗ ಕಷ್ಟಸಾಧ್ಯವೆಂದು ಹೇಳುತ್ತಾರೆ. ಆದ್ದರಿಂದ ಅದನ್ನೇ ಈ ಆಚಾರ್ಯರಿಬ್ಬರೂ ಪ್ರಯೋಗಿಸಲಿ; ನೋಡೋಣ. ಇವರಿಬ್ಬರ ಉಪದೇಶದ ಅಂತರವೂ

ಅದರಿಂದಲೇ ವೇದ್ಯವಾಗುತ್ತದೆ.

ಆಚಾರ್ಯರಿಬ್ಬರೂ—ಭಗವತಿಯ ಅಪ್ಪಣೆಯಂತೆ ಆಗಲಿ.

ವಿದೂಷಕ—ಸರಿ, ಹಾಗಾದರೆ. ನೀವಿಬ್ಬರೂ ಪ್ರೇಕ್ಷಾಗೃಹದಲ್ಲಿ ಸಂಗೀತ ರಚನೆಯನ್ನು ಮಾಡಿ; ಇಲ್ಲಿಗೆ ಮಹಾರಾಜನ ಬಳಿಗೆ ದೂತನನ್ನು ಕಳಿಸಿ. ಅಥವಾ, ಮೃದಂಗಧ್ವನಿಯೇ ನಮ್ಮನ್ನು ಎಚ್ಚರಿಸುವುದು.

ಹರದತ್ತ—ಹಾಗೆಯೇ ಆಗಲಿ (ಏಳುವನು)

(ಗಣದಾಸನು ರಾಣಿಯನ್ನು ನೋಡುವನು.)

ದೇವಿ—ಆಚಾರ್ಯನ ವಿಜಯಕ್ಕೆ ನಾನು ಅಡ್ಡಿ ಬರುವವಳಲ್ಲ. ವಿಜಯ ವಾಗಲಿ.

(ಇಬ್ಬರೂ ಹೊರಡುವರು.)

ಪರಿವ್ರಾಜಿಕೆ—ಆಚಾರ್ಯರಿಬ್ಬರೂ ಸ್ವಲ್ಪ ಹೀಗೆ ಬರೋಣವಾಗಲಿ.

ಇಬ್ಬರೂ—(ಮರಳಿ) ಇದೋ ಬಂದೆವು.

ಪರಿವ್ರಾಜಿಕೆ—ನಿರ್ಣಯಾಧಿಕಾರದಿಂದ ಹೇಳುತ್ತಿದೇನೆ. ಎಲ್ಲ ಅಂಗಗಳ ಸೌಷ್ಠವವೂ ಚೆನ್ನಾಗಿ ಕಾಣುವಂತೆ ವಿರಳವಾದ ಉಡುಗೆತೊಡಿಗೆ ಗಳಿಂದ ಸಜ್ಜುಗೊಳಿಸಿ ನಿಮ್ಮನಿಮ್ಮ ಪಾತ್ರಗಳನ್ನು ಪ್ರವೇಶಗೊಳಿಸ ಬೇಕು.

ಇಬ್ಬರೂ—ಇದನ್ನು ನಮಗೆ ಹೇಳಬೇಕಾಗಿಲ್ಲ. (ತೆರಳುವರು)

ದೇವಿ—(ರಾಜನನ್ನು ನೋಡಿ) ಆರ್ಯಪುತ್ರನು ರಾಜಕಾರ್ಯಗಳಲ್ಲಿಯೂ ಸಹ ಈ ತೆರನಾದ ಉಪಾಯನಿಪುಣತೆಯನ್ನು ಪ್ರಯೋಗಿಸಿದ್ದಿದ್ದರೆ ಎಷ್ಟೋ ಲೇಸಾಗಿರುತ್ತಿತ್ತು.

ರಾಜ—ದೇವಿ,

ನನ್ನೆಸಕಮಲ್ಲವಿದು. ನನ್ನನು ಮನಸ್ವಿನಿಯೆ
ಬೇರೊಂದು ರೀತಿಯೊಳು ಭಾವಿಸದಿರು.
ಒಬ್ಬರೊಬ್ಬರ ಜಸದೊಳಾನುವುದಸೂಯೆಯನು
ಸಹಜ ದಲ್ ಸದೃಶವಿದ್ಯಾವಂತರು. ೨೦

(ನೇಪಥ್ಯದಲ್ಲಿ ಮೃದಂಗಧ್ವನಿ. ಎಲ್ಲರೂ ಕಿವಿಗೊಡುವರು.)

ಪರಿವ್ರಾಜಿಕೆ—ಆಹಾ, ಸಂಗೀತವು ಮೊದಲಾಯಿತು.

ಪೋಡಗಳ ಮೊಳಗುಗಳಿವೆಂದು ಸಂಶಯಗೊಂಡು
ನವಿಲುಗಳು ಕೊರಳೆತ್ತಿ ಕೂಗುತಿರಲು
ಮಧ್ಯಮಸ್ವರದಿಂದಲೊಗೆಯುವೀ ಮದ್ದಳೆಯು
ಮಾರ್ಜನಗಳೆಳೆದಪವು ನಮ್ಮ ಬಗೆಯ. ೨೨

ರಾಜ—ದೇವಿ, ನಾವು ಸಾಮಾಜಿಕರಾಗೋಣ.

ದೇವಿ—(ತನಗೆ ತಾನೆ) ಆಹಾ! ಆರ್ಯಪುತ್ರನ ಅವಿನಯವೇ!

(ಎಲ್ಲರೂ ಏಳುವರು.)

ವಿದೂಷಕ—(ಗುಟ್ಟಾಗಿ) ಅಯ್ಯಾ, ವಯಸ್ಯ! ನಿಧಾನವಾಗಿ ನಡೆ. ಧಾರಿಣಿ ದೇವಿ ಬೇರೆ ಏನಾದರೂ ಅಂದಾಳು.

ರಾಜ—

ಧೃತಿಯನವಲಂಬಿಸುವೆನಾದರು ತ್ವರಿತಗೊಳಿಪುದು ಮುರಜವಾದ್ಯಧ್ವನಿಯಿದು
ಸಿದ್ಧಿಪಥವನು ಸಾರಲೆಂದಿರುವಿಂದಿನೆನ್ನ ಮನೋರಥಧ್ವನಿಸಂತಿದು. ೨೩

(ಎಲ್ಲರೂ ತೆರಳುವರು.)

## ಮೊದಲನೆಯ ಅಂಕ ಮುಗಿದುದು

# ಎರಡನೆಯ ಅಂಕ

(ಸಂಗೀತ ಸಂಬಂಧವಾದ ಸಿದ್ಧತೆಗಳು ಮುಗಿದ ಬಳಿಕ ಮಿತ್ರಸಹಿತನಾದ ರಾಜನೂ ಧಾರಿಣಿ, ಪರಿವ್ರಾಜಿಕೆ ಮತ್ತು ಪರಿವಾರದವರೂ ಉಚಿತ ಪೀಠಸ್ಥರಾಗಿ ಪ್ರವೇಶಿಸುವರು.)

ರಾಜ—ಭಗವತಿ, ಪೂಜ್ಯರಾದ ಈ ಆಚಾರ್ಯರಿಬ್ಬರಲ್ಲಿ ಮೊದಲು ಯಾರ ಉಪದೇಶವನ್ನು ನೋಡೋಣ ?

ಪರಿವ್ರಾಜಿಕೆ—ಇಬ್ಬರೂ ಜ್ಞಾನದಲ್ಲಿ ಸಮಾನವೃದ್ಧರೇ ಆದರೂ ವಯಸ್ಸಿನಲ್ಲಿ ಗಣದಾಸನು ವೃದ್ಧನಾದುದರಿಂದ ಮೊದಲ ಸಮ್ಮಾನಕ್ಕೆ ಅವನೇ ಅರ್ಹನಾಗಿದ್ದಾನೆ.

ರಾಜ—ಹಾಗಾದರೆ, ಮೌದ್ಗಲ್ಯ ! ಆ ಪೂಜ್ಯರಿಗೆ ಈ ವಿಷಯವನ್ನು ತಿಳಿಸಿ ನಿನ್ನ ಕೆಲಸಕ್ಕೆ ನೀನು ಹೋಗು.

ಕಂಚುಕಿ—ಸ್ವಾಮಿಯ ಅಪ್ಪಣೆಯಾದಂತೆ. (ತೆರಳುವನು)

ಗಣದಾಸ—(ಪ್ರವೇಶಿಸಿ) ದೇವ, ಮಧ್ಯಲಯದಲ್ಲಿ ಹಾಡುವ ಶರ್ಮಿಷ್ಠೆಯಿಂದ ರಚಿತವಾಗಿರುವ ನಾಲ್ಕು ಖಂಡಗಳ ಚಲಿತನಾಟ್ಯವಿದೆ. ಮಹಾಸ್ವಾಮಿಯವರು ಅದರಲ್ಲಿ ನಾಲ್ಕನೆಯ ಖಂಡದ ಪ್ರಯೋಗವನ್ನು ಈಗ ಸಾವಧಾನವಾದ ಮನಸ್ಸಿನಿಂದ ಪರಾಮರ್ಶಿಸಬೇಕು.

ರಾಜ—ಆಚಾರ್ಯ ! ಗೌರವಬುದ್ಧಿಯಿಂದ ಗಮನಿಸಲು ಸಿದ್ಧನಾಗಿಯೇ ಇರುವೆನು.

(ಗಣದಾಸನು ತೆರಳುವನು.)

ರಾಜ—(ಮರೆಯಲ್ಲಿ) ಮಿತ್ರ—

ಒಳಗೆ ಬಣ್ಣದ ಮನೆಯೊಳಿರ್ಪಳ
ಕಾಂಬ ಕೌತುಕದಿಂದಲೆನ್ನೀ ಕಂಗಳು
ತೆರೆಯನಸಹನೆಯಿಂದೆ ತೆಗೆದೆಸೆ
ಯಲ್ಕೊಡರ್ಚಿದುವೆನುವ ತೆರದೊಳು ತೋರ್ಪುವು. ೧

ವಿದೂಷಕ—(ಮರೆಯಲ್ಲಿ) ಅಯ್ಯಾ ಮಿತ್ರ, ನಿನ್ನ ನಯನಮಧು ಸಮೀಪ

ದಲ್ಲಿಯೇ ಇದೆ. ನೊಣವೂ ಬಳಿಯಲ್ಲಿಯೇ ಇದೆ. ಆದ್ದರಿಂದ ಜಾಗರೂಕನಾಗಿ ಸವಿನೋಡುತ್ತಿರು.

(ಬಳಿಕ ತನ್ನ ಅಂಗಸೌಷ್ಠವವನ್ನು ಪರಿಶೀಲಿಸುತ್ತಿರುವ ಆಚಾರ್ಯನೊಡನೆ ಮಾಳವಿಕೆ ಪ್ರವೇಶಿಸುವಳು.)

ವಿದೂಷಕ—(ಮರೆಯಲ್ಲಿ) ನೋಡು ನೋಡು, ಮಿತ್ರ! ಈಕೆಯ ಸೌಂದರ್ಯ ಚಿತ್ರದಲ್ಲಿ ಇದ್ದುದಕ್ಕೆ ಯಾವ ರೀತಿಯಿಂದಲೂ ಕಡಿಮೆಯಾದಂತಿಲ್ಲ.

ರಾಜ—(ಮರೆಯಲ್ಲಿ) ಮಿತ್ರ—

ರೂಹು ನಿಜದೊಳು ಇನಿತು ಚೆಲುವಿರದೆಂದು ಮನದೊಳು
 ಶಂಕೆಗೊಂಡೆನು ನೋಡಿ ಚಿತ್ರದೊಳಿವಳನು
ಈಗಳಾಹಾ ಚಿತ್ರಗಾರನಿಗಿವಳ ಚಿತ್ರಿಸು
 ವಂದು ಶಿಥಿಲಸಮಾಧಿಯಾದುದನರಿವೆನು. ೨

ಗಣದಾಸ—ವತ್ಸೆ, ಲಜ್ಜೆ ಪಡದೆ ಸ್ವಸ್ಥವಾಗಿ ನಿಲ್ಲು.

ರಾಜ—(ಮರೆಯಲ್ಲಿ) ಆಹಾ! ಈಕೆಯ ರೂಪ ಸರ್ವಾಂಗಗಳಲ್ಲಿಯೂ ನಿರ್ದುಷ್ಟವಾಗಿದೆ.

ಶರದಿಂದುಕಾಂತಿವೊಲು ಮೆರೆಯುತಿಹುದಾನನವು
 ಕಣ್ಣುಗಳು ನೀಳಮೆನಲೆಸೆಯುತಿಹವು
ತೋಳುಗಳು ಹೆಗಲೆಡೆಯೊಳೊಂದಿನಿಸು ಬಾಗಿಹವು
 ಪುಷ್ಟಕುಚಯುಗಳದಿಂದೆಸೆವುದುರವು
ಕರದೆ ತಿರ್ದಿದವೋಲು ಪಾರ್ಶ್ವಂಗಳೆಸೆಯುವುವು
 ಒರ್ಪಿಡಿಯೊಳಾನುವೋಲಿಹುದು ನಡುವು
ವಿಪುಳಜಘನವು ಮೆರೆಯುತಿಹುದತಿಮನೋಹರವು
 ಕೊಂಕುವೆರಲೆಸೆಯುತಿರುವಡಿಗಳಿಹವು
ನಾಟ್ಯಗುರು ರೂಹಿಸುವ ಭಾವಗಳಿಗನುಗುಣವು
 ಎನುವವೋಲಿರ್ಪುದಿವಳಂಗಾಂಗವು. ೩

ಮಾಳವಿಕೆ—(ಉಪವಪನವನ್ನು ಮಾಡಿ ಚೌಪದಿಯನ್ನು ಹಾಡುವಳು.)

ಪ್ರಿಯನು ದುರ್ಲಭನಹನು ಮನವೇ ನೀ ನಿರಾಶೆಯ ತಳೆವುದು
ಓವೊ ಹಾರುತಲಿರುವುದೇತಕೊ ಕಾಣೆನೆನ್ನೆಡಗಣ್ಣಿದು

ಸಾರ್ವದಾನಿಂದೆಂತು ಚಿರದೃಷ್ಟನನು ಕಾದಲನಿವನನು
ಅಸ್ವತಂತ್ರಳು ನಾಥ ಗಣಿಪುದು ತೃಷಿತೆಯಿವಳೆಂದೆನ್ನನು. ೪

ವಿದೂಷಕ—(ಮರೆಯಲ್ಲಿ) ಮಿತ್ರ, ಈ ಚೌಪದಿಯ ವಸ್ತುವಿನ ನೆಪದಲ್ಲಿ ಈಕೆ ತನ್ನನ್ನೇ ನಿನಗರ್ಪಿಸಿಕೊಳ್ಳುವಂತೆ ತೋರುವುದು.

ರಾಜ—ಮಿತ್ರ, ನನಗೂ ಹಾಗೆಯೇ ತೋರುತ್ತದೆ.

"ನಾಥ ತಿಳಿ ನಿನ್ನೊಳಿವಳನುರಕ್ತಳಾಗಿಹಳು"
ಎನ್ನುವುದನಳವಡಿಸುತಿನಿನುಡಿಯೊಳು
ಬಳಿಕ ತಾಂ ಸ್ವಾಂಗನಿರ್ದೇಶಪೂರ್ವಕವೆನಲು
ಗೇಯವಿದನಭಿನಯಿಸಿ ತೋರುತಿರಲು
ಧಾರಿಣಿಯ ಸನ್ನಿಧಿಯೊಳೆನ್ನೊಳಿರುವರ್ತಿಯನು
ಸೂಚಿಸುವ ಬೇರೆ ಬಗೆ ಕಾಣದಿವಳು
ಸುಕುಮಾರಮೆನಿಸಿದೀ ಬಿನ್ನಪದ ವ್ಯಾಜದೊಳು
ನನ್ನನೆಯ ಕುರಿತಾಡುವಂತೆಸೆವಳು. ೫

(ಹಾಡು ಮುಗಿದ ಮೇಲೆ ಮಾಳವಿಕೆ ಹೊರಡಲು ಬಯಸುವಳು.)

ವಿದೂಷಕ—ತಾಯಿ, ಸ್ವಲ್ಪ ಇರು. ಕ್ರಮದಲ್ಲಿ ಏನನ್ನೋ ನೀನು ಮರೆತಿರುವಂತಿದೆ. ಅದನ್ನೀಗ ಕೇಳುತ್ತೇನೆ.

ಗಣದಾಸ—ವತ್ಸೆ, ನಿಲ್ಲು. ಉಪದೇಶ ವಿಶುದ್ಧವಾದುದೆಂದು ನಿರೂಪಿಸಿ ಹೊರಡುವೆಯಂತೆ.

(ಮಾಳವಿಕೆ ಹಿಂತಿರುಗಿ ನಿಲ್ಲುವಳು.)

ರಾಜ—(ತನಗೆ ತಾನೆ) ಆಹಾ! ಎಲ್ಲ ಅವಸ್ಥೆಗಳಲ್ಲಿಯೂ ಈಕೆಯ ಸೌಂದರ್ಯ ಶೋಭಾವಿಶೇಷದಿಂದ ತುಂಬಿದೆ. ಹಾಗೆಯೇ ಸರಿ.—

ಸದ್ದುಗೈಯುಡೆ ಕಡಗ ಮಣಿಕಟ್ಟಿನೊಳು ನಿಂದಿರೆ ಜಘನದೆಡೆ ಎಡಗೈಯಿರೆ
ನೆಳಲವಳ್ಳಿಯ ಹರೆಯವೋಲಿಹ ಬಲದಗೈಯನು ಸಡಿಲಗೊಳಿಸುತಲಿಳಿಸಿರೆ
ಅಡಿಯ ಹೆಬ್ಬೆರಳರೆದ ಕುಟ್ಟಿಮದಲರಿನೆಡೆಯೊಳು ಕಣ್ಣ ನೋಟವು ನಾಂಟಿರೆ
ನೃತ್ಯಕಿಂ ಮಿಗಿಲೆಸೆವಳಾಹಾ ನಿಮಿರಿ ಮೇಲ್ಮೈ ನೇರಮಿಂತಿರೆ ನಿಂತಿರೆ. ೬

ದೇವಿ—ಇದೇನು? ಆಚಾರ್ಯನು ಗೌತಮನ ಮಾತಿಗೂ ಗಮನಕೊಡಬಹುದೆ?

ಗಣದಾಸ—ದೇವಿ, ಹಾಗಲ್ಲ. ಮಹಾರಾಜನು ಇಟ್ಟಿರುವ ವಿಶ್ವಾಸದ ಬಲ

ದಿಂದ ಸೂಕ್ಷ್ಮದರ್ಶಿತ್ವವನ್ನು ಅವನಲ್ಲಿ ನಾವು ನಿರೀಕ್ಷಿಸಬಹುದು. ನೋಡು—

ದಡ್ಡ ಬಲ್ಲರ ಬೆರೆದು ದೊಡ್ಡವನೆನಿಪನು
ಕತಕ ಸಂಗದೊಳುದಕ ತಿಳಿಯುವ ತೆರದೊಳು. ೭

(ವಿದೂಷಕನನ್ನು ನೋಡಿ) ಆರ್ಯನು ಹೇಳುವುದನ್ನು ಕೇಳಬಯಸುತ್ತೇನೆ.

ವಿದೂಷಕ—(ಗಣದಾಸನನ್ನು ನೋಡಿ) ಮೊದಲು ಪರೀಕ್ಷಕರನ್ನು ಕೇಳು. ನಾನು ಕಂಡು ಹಿಡಿದಿರುವ ಲೋಪವನ್ನು ಆಮೇಲೆ ಹೇಳುತ್ತೇನೆ.

ಗಣದಾಸ—ಭಗವತಿ, ಗುಣವಾಗಲಿ ದೋಷವಾಗಲಿ ಕಂಡುದನ್ನು ಕಂಡಂತೆ ಹೇಳಬೇಕು.

ಪರಿವ್ರಾಜಿಕೆ—ಎಲ್ಲವೂ ಶಾಸ್ತ್ರಪ್ರಕಾರವಾಗಿಯೇ ಇದೆ. ಯಾವುದರಲ್ಲಿಯೂ ದೋಷವಿಲ್ಲ. ಹೇಗೆಂದರೆ—

ನುಡಿಯುಡಂಗಿರುವವಯವಂಗಳಿನರ್ಥವನು
ತಾ ಸ್ಪಷ್ಟಗೊಳಿಸುತಲಿಸೆದಳು
ಹರೆಯುವೋಲಿರುವೆಳೆಯ ಕೈಗಳಿನೆಸಗಿದಭಿನಯ
ಮೃದು ಮನೋಹರವೆನಿಸಿತು
ಭಿನ್ನವೃತ್ತಿಯೊಳೊಂದುಭಾವವ ವಿಷಯದಿಂದಿ
ನ್ನೊಂದು ನೂಗುತಲಿದ್ದಿತು
ಆದರೂ ಆ ಮುಖ್ಯರಸ ತಾನೊಂದೆತೆರನಿರು
ವಂತೆ ನಾಟ್ಯಂಗೈದಳು. ೮

ಗಣದಾಸ—ಮಹಾಸ್ವಾಮಿಯವರು ಈ ವಿಷಯದಲ್ಲಿ ಏನು ಅಭಿಪ್ರಾಯ ಪಡುವರು ?

ರಾಜ—ಗಣದಾಸ, ನಮ್ಮ ಸ್ವಪಕ್ಷಾಭಿಮಾನ ಶಿಥಿಲವಾಯಿತು.

ಗಣದಾಸ—ಈಗ ನಾನು ನಾಟ್ಯೋಪಾಧ್ಯಾಯನಾದೆ.

ಶುದ್ಧವೆನುವರು ಬುಧರು ಗುರುವಿನುಪದೇಶವನು
ನಿರ್ದುಷ್ಟವೆಂದೆನಲು ನಿನ್ನನ್ನರದನು
ಬೆಂಕಿಯೊಳು ಬಂಗಾರ ಕಪ್ಪಾಗದಿರುವಂದು
ಗಣಿಸುವೋಲವರದನು ಸಲೆ ಶುದ್ಧವೆಂದು. ೯

ದೇವಿ—ಈ ಪರೀಕ್ಷಕರು ಮೆಚ್ಚಿದುದರಿಂದ ಆರ್ಯನು ವರ್ಧಿಸಿದನು; ತುಂಬ ಸಂತೋಷ.

ಗಣದಾಸ—ಮಹಾರಾಣಿಯವರ ಆಶ್ರಯವೇ ನನ್ನ ಅಭಿವೃದ್ಧಿಗೆ ಕಾರಣ. (ವಿದೂಷಕನನ್ನು ನೋಡಿ) ಗೌತಮ, ನಿನ್ನ ಮನಸ್ಸಿನಲ್ಲಿ ಏನಿರುವುದೋ ಅದನ್ನೀಗ ಹೇಳು.

ವಿದೂಷಕ—ಪ್ರಥಮೋಪದೇಶದರ್ಶನ ಸಮಯದಲ್ಲಿ ಬ್ರಾಹ್ಮಣಪೂಜೆ ಮೊದಲು ನಡೆಯಬೇಕಾಗಿತ್ತು. ನೀವು ಅದನ್ನು ಮರೆತುಬಿಟ್ಟಿರಲ್ಲವೆ?

ಪರಿವ್ರಾಜಿಕೆ—ಆಹಾ! ಪ್ರಯೋಗಸಂಬಂಧವಾದ ಈ ಪ್ರಶ್ನೆ ಎಷ್ಟು ಉಚಿತ ವಾಗಿದೆ!

(ಎಲ್ಲರೂ ಗಟ್ಟಿಯಾಗಿ ನಗುವರು. ಮಾಳವಿಕೆಯೂ ಮುಗುಳುನಗೆ ಬೀರುವಳು.)

ರಾಜ—(ತನಗೆ ತಾನೆ) ಆಹಾ! ಕಾಣಬೇಕಾದುದನ್ನು ಕಂಡ ನನ್ನ ಕಣ್ಣು ಸಾರ್ಥಕವಾಯಿತು.

ಕಂಡವಿವು ಕಣ್ಣುಗಳು ಕೇಸರಂಗಳಿನಿಸೆವ ತಾವರೆಯ ದೊರೆಯ
ಸುಲಿಪಲ್ಗಳಿನಿಸೆಸೆವ ನಗೆಮುಗುಳನಿಡುಗಣ್ಗಳಿವಳ ಮೊಗಸಿರಿಯ. ೧೦

ಗಣದಾಸ—ಮಹಾಬ್ರಾಹ್ಮಣ, ಇದು ಪ್ರಥಮನೇಪಥ್ಯ; ಸಂಗೀತಾಭಿನಯ ವಲ್ಲ ಕಂಡೆಯಾ. ಇಲ್ಲದಿದ್ದರೆ ಪೂಜಾರ್ಹನಾದ ನಿನ್ನನ್ನು ಮೊದಲು ಗೌರವಿಸದೆ ಇರುತ್ತಿದ್ದೆವೆ?

ವಿದೂಷಕ—ಬರಿದೆ ಗುಡುಗುವ ಬಾನು ನೋಡಿ ಮಳೆ ಹನಿಗೆ ಬಾಯಿಬಿಟ್ಟ ಮುಗ್ಧ ಚಾತಕದಂತೆ ಆಯಿತು ನನ್ನ ಗತಿ.

ಪರಿವ್ರಾಜಿಕೆ—ಹೌದು, ಹಾಗೆಯೇ ಸರಿ.

ವಿದೂಷಕ—ಭಗವತಿ, ಮೂಢರಿಗೆ ಪಂಡಿತರ ಪರಿತೋಷವೇ ಪ್ರಮಾಣವಷ್ಟೆ. ಭಗವತಿ ಚೆನ್ನಾಗಿದೆ ಎಂದು ಹೇಳಿದ್ದರಿಂದ ಇದೋ, ನಾನು ಈ ಪಾರಿತೋಷಕವನ್ನು ಕೊಡುತ್ತಿದೇನೆ. (ರಾಜನ ಕೈಕಡಗಗಳನ್ನು ಸೆಳೆಯುವನು.)

ದೇವಿ—ಇರು, ಇರು. ಇನ್ನೊಂದು ಪ್ರಯೋಗದ ಗುಣವನ್ನೇ ತಿಳಿಯದೆ ಆಭರಣವನ್ನೇಕೆ ಕೊಡುತ್ತೀಯೆ.

ವಿದೂಷಕ—ಏಕೆಂದರೆ? ಇದು ಇನ್ನೊಬ್ಬರ ಸೊತ್ತು ಎಂದು!

ದೇವಿ—(ಆಚಾರ್ಯನನ್ನು ನೋಡಿ) ಆರ್ಯ ಗಣದಾಸ, ನಿನ್ನ ಶಿಷ್ಯಳ ಉಪದೇಶಪ್ರದರ್ಶನ ಮುಗಿಯಿತಲ್ಲವೆ?

ಗಣದಾಸ–ಮಗು, ಬಾ ಇನ್ನು. ಹೋಗೋಣ. (ಆಚಾರ್ಯನೊಡನೆ ಮಾಳವಿಕೆ ತೆರಳುತ್ತಾಳೆ.)

ವಿದೂಷಕ—(ರಾಜನನ್ನು ನೋಡಿ, ಮರೆಯಲ್ಲಿ) ನಿನ್ನನ್ನು ಓಲೈಸುವುದರಲ್ಲಿ ನನ್ನ ಬುದ್ಧಿವೈಭವವೆಲ್ಲ ಇಷ್ಟೆ.

ರಾಜ—(ಮರೆಯಲ್ಲಿ) 'ಇಷ್ಟೆ' ಎನಬೇಡ. ಏಕೆಂದರೆ—

ಮನ್ನೇತ್ರಭಾಗ್ಯಮಿಂದಸ್ತಮಿಸಿತೆಂದೆನುವೆ
ಹೃದಯದ ಮಹೋತ್ಸವಮಿದಳಿಯಿತೆನುವೆ
ಅಲ್ಲದಿರೆ ಧೃತಿಯು ಕದ ಮುಚ್ಚಿತೆಂದೆಣಿಸುವೆನು
ತಾನಿಂದು ಮಾಳವಿಕೆ ತೆರಳಿದುದನು. ೧೧

ವಿದೂಷಕ—ಭಲೆ, ದರಿದ್ರನಾದ ರೋಗಿಯಂತೆ ವೈದ್ಯನೇ ಔಷಧವನ್ನು ಉಚಿತವಾಗಿ ತಂದುಕೊಡಬೇಕೆಂದು ಆಸೆಪಡುತ್ತೀಯೆ.

ಹರದತ್ತ—(ಪ್ರವೇಶಿಸಿ) ಪ್ರಭು, ನನ್ನ ಉಪದೇಶವನ್ನು ಪರಾಮರ್ಶಿಸುವ ಕೃಪೆ ಮಾಡಬೇಕು.

ರಾಜ—(ತನಗೆ ತಾನೆ) ದರ್ಶನದ ಉದ್ದೇಶವೇನೋ ಮುಗಿಯಿತು. (ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಪ್ರಕಾಶವಾಗಿ) ಹರದತ್ತ, ನಾವು ಕುತೂಹಲರಾಗಿಯೇ ಇದ್ದೇವೆ.

ಹರದತ್ತ—ಅನುಗ್ರಹೀತನಾದೆ.

(ತೆರೆಯ ಹಿಂದೆ ವೈತಾಳಿಕ)

ಜಯವಾಗಲಿ ಮಹಾರಾಜನಿಗೆ, ಪ್ರಭು ಮಧ್ಯಾಹ್ನವಾಗಿದೆ.

ಬಿಸಿಲನಾನದೆ ಮನೆಯ ಮಹಡಿಯ ಸೂರನಾಳಿದಿವೆ ಪಾರಿವಾಳಗಳು
ಕೊಳದ ತಾವರೆ ಎಲೆಯ ನೆಳಲೊಳು ಕಣ್ಣ ಮುಚ್ಚಿವೆ ರಾಜಹಂಸಗಳು
ವಾರಿಯಂತ್ರದ ಪೊಣ್ಮುವಿರಿಸಲ್ವನಿಯನೀಂಟಿವೆ ಗೃಹಮಯೂರಗಳು
ಸರ್ವನೃಪಗುಣವೆಸೆವ ನಿನ್ನೊಲು ಸರ್ವಕರಗಳಿನಿನನು ತೊಳಗುವನು. ೧೨

ವಿದೂಷಕ—ಅಯ್ಯಯ್ಯೊ, ಬ್ರಾಹ್ಮಣರಿಗೆ ಭೋಜನಕಾಲ ಇದು. ಪ್ರಭು, ನಿನಗೂ ಇದು ಭೋಜನಕಾಲವೇ. ಊಟದ ವೇಳೆ ಮೀರಿದರೆ

ಆಗುವುದಿಲ್ಲವೆಂದು ವೈದ್ಯರೂ ಹೇಳಿದ್ದಾರೆ. ಹರದತ್ತ, ನೀನೇನು ಹೇಳುತ್ತೀಯೆ ಈಗ ?

ಹರದತ್ತ—ಇದಕ್ಕಿಂತ ಬೇರೆಯಾಗಿ ಹೇಳುವುದಕ್ಕೆ ಅವಕಾಶವಿಲ್ಲವಾಗಿದೆ.

ರಾಜ—(ಹರದತ್ತನನ್ನು ನೋಡಿ) ಒಳ್ಳೆಯದು, ನಿನ್ನ ಉಪದೇಶವನ್ನು ನಾಳೆ ನೋಡುತ್ತೇವೆ. ಈಗ ವಿಶ್ರಮಿಸಿಕೊ.

ಹರದತ್ತ—ಮಹಾಸ್ವಾಮಿಯ ಅಪ್ಪಣೆಯಂತೆ. (ತೆರಳುತ್ತಾನೆ.)

ದೇವಿ—ಆರ್ಯಪುತ್ರನು ಸ್ನಾನವನ್ನು ಮುಗಿಸುವುದಾಗಲಿ.

ವಿದೂಷಕ—ದೇವಿ, ಭೋಜನವಸ್ತುಗಳನ್ನು ವಿಶೇಷವಾಗಿ ತ್ವರೆಗೊಳಿಸು.

ಪರಿವ್ರಾಜಿಕೆ-(ಎದ್ದು)ನಿಮಗೆ ಮಂಗಳವಾಗಲಿ. (ಧಾರಿಣಿಯೊಡನೆ ತೆರಳುವಳು.)

ವಿದೂಷಕ—ಮಿತ್ರ, ಮಾಳವಿಕೆ ರೂಪದಲ್ಲಿ ಅಷ್ಟೇ ಅಲ್ಲ, ಶಿಲ್ಪದಲ್ಲಿಯೂ ಅದ್ವಿತೀಯಳು.

ರಾಜ—ಮಿತ್ರ,

> ಲಲಿತವಿಜ್ಞಾನವಿದನವ್ಯಾಜಸುಂದರಿಯೊಳಜನು
> ಹೊಂದಿಸುತೆ ವಿಷದಿಗ್ಧಮೆನಿಸಿಹನು ಮನ್ಮಥಾಸ್ತ್ರವನು. ೧೩

ಹೆಚ್ಚು ಹೇಳುವುದೇನಿದೆ ? ಇನ್ನು ನನ್ನ ಕ್ಷೇಮಚಿಂತನೆಯೆಲ್ಲ ನಿನಗೇ ಸೇರಿದ್ದು.

ವಿದೂಷಕ—ನೀನೂ ನನ್ನನ್ನು ಕುರಿತು ಯೋಚಿಸಬೇಕಾದ್ದೇ. ನನ್ನ ಹೊಟ್ಟೆ, ಅಂಗಡಿಯ ಹುರಿಯೋಡಿನಂತೆ ಕಾದು ಹೋಗುತ್ತಿದೆ.

ರಾಜ—ಹಾಗೆಯೇ ನೀನೂ ಕೂಡ ಮಿತ್ರನಾದ ನನ್ನ ವಿಷಯದಲ್ಲಿ ತ್ವರೆಗೊಳ್ಳಬೇಕು.

ವಿದೂಷಕ—ನಾನು ದಕ್ಷಿಣೆ ತೆಗೆದುಕೊಂಡಿದ್ದೇನೆ. ಆದರೇನು ? ಮೋಡಗಳ ಸಾಲಿನ ಮಧ್ಯದಲ್ಲಿ ಬೆಳುದಿಂಗಳು ಹೇಗೋ ಹಾಗೆ ಆ ಮಾಳವಿಕೆ ಪರಾಧೀನ ದರ್ಶನೆಯಾಗಿದ್ದಾಳೆ. ನೀನೋ ಕಟುಕನ ಅಂಗಡಿಯ ಮಾಂಸಕ್ಕೆ ಆಶೆಪಟ್ಟು ಸುತ್ತಲೂ ಸುತ್ತುತ್ತಿರುವ ಹದ್ದಿನಂತೆ ಹೆದರುತ್ತಿದ್ದೀಯೆ. ಅಲ್ಲದೆ ಬಹಳ ಆತುರದಿಂದ ಕಾರ್ಯಸಿದ್ಧಿಯನ್ನು ಪ್ರಾರ್ಥಿಸುತ್ತಿರುವಂತೆಯೂ ನನಗೆ ತೋರುತ್ತಿದೆ.

ರಾಜ—ಮಿತ್ರ, ಆತುರವಿಲ್ಲದೆ ಇರುವುದಾದರೂ ಹೇಗೆ ?

ನನ್ನ ಬಗೆಯಿದು ಪೆಂಡವಾಸದ ಸತಿಯರೆಲ್ಲರ ಹರಿಬದಿಂ ಪೊಗದಿರುಹುತೆ
ಸ್ನೇಹರಸಕಿಂದಾಶ್ರಯಿಪ್ಪುದು ವಾಮಲೋಚನೆಯೊರ್ವಳನೆ ತಾನೆಣ್ಣುತೆ. ೧೪

(ಎಲ್ಲರೂ ತೆರಳುವರು.)

## ಎರಡನೆಯ ಅಂಕ ಮುಗಿದುದು

---

# ಮೂರನೆಯ ಅಂಕ

(ಬಳಿಕ ಪರಿವ್ರಾಜಿಕೆಯ ಪರಿಚಾರಿಕೆಯಾದ ಸಮಾಹಿತಿಕೆ ಪ್ರವೇಶಿಸುತ್ತಾಳೆ.)

ಸಮಾಹಿತಿಕೆ—ಉಪಾಯನಕ್ಕಾಗಿ ಮಾದಳಫಲವೊಂದನ್ನು ತೆಗೆದುಕೊಂಡು ಬಾ ಎಂದು ಪೂಜ್ಯ ಪರಿವ್ರಾಜಿಕೆ ನನಗೆ ಅಪ್ಪಣೆ ಮಾಡಿದಾಳೆ. ಅದಕ್ಕಾಗಿ ಪ್ರಮದವನಪಾಲಿಕೆಯಾದ ಮಧುಕರಿಕೆಯನ್ನು ಹುಡುಕುತ್ತಿದೇನೆ. (ಅತ್ತಿತ್ತ ನಡೆದು ನೋಡಿ) ಓಹೋ! ಇಲ್ಲಿದಾಳೆ. ಸ್ವರ್ಣಾಶೋಕ ವೃಕ್ಷವನ್ನೇ ನೋಡುತ್ತ ನಿಂತಿದಾಳೆ ಮಧುಕರಿಕೆ. ಹತ್ತಿರ ಹೋಗಿ ಮಾತಾಡಿಸುತ್ತೇನೆ.

(ಬಳಿಕ ಉದ್ಯಾನವನಪಾಲಿಕೆ ಪ್ರವೇಶಿಸುವಳು)

ಸಮಾಹಿತಿಕೆ—(ಬಳಿಗೆ ಹೋಗಿ) ಮಧುಕರಿಕೆ; ಉದ್ಯಾನವನಪಾಲನೆ ಸುಗಮವಾಗಿದೆ ತಾನೆ.

ಮಧುಕರಿಕೆ—ಓಹೋ, ಸಮಾಹಿತಿಕೆ! ಸಖಿ, ನಿನಗೆ ಸ್ವಾಗತ.

ಸಮಾಹಿತಿಕೆ—ಸಖಿ, ಪೂಜ್ಯ ಪರಿವ್ರಾಜಿಕೆ ಹೇಳಿಕಳುಹಿದಾಳೆ: 'ನಮ್ಮಂತಹವರು ಮಹಾರಾಣಿಯವರನ್ನು ಬರಿಗೈಯಲ್ಲಿ ನೋಡಬಾರದು. ಆದ್ದರಿಂದ ಮಹಾರಾಣಿಯವರನ್ನು ಮಾದಳಫಲ ತೆಗೆದುಕೊಂಡು ಹೋಗಿ ಸಂದರ್ಶಿಸಬೇಕೆಂದಿರುವೆನು' ಎಂದು.

ಮಧುಕರಿಕೆ—ಮಾದಳ ಹಣ್ಣು ಬಳಿಯಲ್ಲಿಯೇ ಇದೆ. ಅದಿರಲಿ; ಪರಸ್ಪರ ವಿವಾದ ಮಾಡುತ್ತಿದ್ದ ಆ ನಾಟ್ಯಾಚಾರ್ಯರಿಬ್ಬರಲ್ಲಿ ಯಾರ ಉಪದೇಶ ಪೂಜ್ಯಳ ಮೆಚ್ಚಿಕೆಗೆ ಪಾತ್ರವಾಯಿತು? ಹೇಳು.

ಸಮಾಹಿತಿಕೆ—ಶಾಸ್ತ್ರದಲ್ಲಿಯೂ, ಪ್ರಯೋಗದಲ್ಲಿಯೂ ಇಬ್ಬರೂ ನಿಪುಣರೇ. ಆದರೆ ಶಿಷ್ಯಳ ಗುಣವಿಶೇಷದಿಂದ ಗಣದಾಸನೇ ಶ್ರೇಷ್ಠನೆಂದು ಮೆಚ್ಚಲಾಯಿತು.

ಮಧುಕರಿಕೆ—ಒಳ್ಳೆಯದು, ಮಾಳವಿಕೆ ವಿಷಯವಾಗಿ ಜನ ಏನೇನೋ ಆಡಿಕೊಳ್ಳುತ್ತಿದ್ದರಲ್ಲ, ಆ ವಿಚಾರವೇನು?

ಸಮಾಹಿತಿಕೆ—ಅವಳ ವಿಷಯದಲ್ಲಿ ಮಹಾರಾಜನು ತುಂಬ ಅಭಿಲಾಷೆ

ಯುಳ್ಳವನಾಗಿರುವನು. ಕೇವಲ ಧಾರಿಣೀದೇವಿಯ ಮನಸ್ಸ
ನ್ನೋಯಿಸಬಾರದೆಂದು ಆತನು ತನ್ನ ಪ್ರಭುತ್ವವನ್ನು ಪ್ರದರ್ಶಿಸಿಲ್ಲ.
ಮಾಳವಿಕೆ ಕೂಡ ಮುಡಿದು ತೆಗೆದ ಮಲ್ಲಿಗೆಯ ಮಾಲೆಯ ಹಾಗೆ
ಇತ್ತೀಚೆಗೆ ಬಾಡಿ ಹೋದಂತೆ ತೋರುತ್ತಿದಾಳೆ. ಇದಕ್ಕೂ ಹೆಚ್ಚು
ನನಗೇನೂ ತಿಳಿಯದು. ಇನ್ನು ನನ್ನನ್ನು ಬಿಟ್ಟುಕೊಡು.

ಮಧುಕರಿಕೆ—ಓಹೋ! ಈ ಕೊಂಬೆಯಲ್ಲಿಯೇ ತೂಗುತ್ತಿರುವ ಮಾದಳ
ವನ್ನು ತೆಗೆದುಕೊಂಡು ಹೋಗು.

ಸಮಾಹಿತಿಕೆ—(ನಾಟ್ಯದಿಂದ ತೆಗೆದುಕೊಂಡು) ಸಖಿ, ಇದಕ್ಕಿಂತಲೂ ಮನೋ
ಹರವಾದ ಸಾಧುಜನ ಶುಶ್ರೂಷಾಫಲವನ್ನು ನೀನು ಪಡೆ. (ತೆರಳುವಳು)

ಮಧುಕರಿಕೆ—ಸಖಿ, ಇಬ್ಬರೂ ಜೊತೆಯಲ್ಲಿಯೇ ಹೋಗೋಣ. ಈ ಸ್ವರ್ಣಾ
ಶೋಕ ಎಷ್ಟು ದಿವಸವಾದರೂ ಹೂಬಿಡದೆಯೇ ಇದೆ. ಇದಕ್ಕೆ
ದೋಹದವನ್ನು ಮಾಡಿಸಬೇಕೆಂದು ದೇವಿಗೆ ಬಿನ್ನವಿಸಿಕೊಳ್ಳುತ್ತೇನೆ.

ಸಮಾಹಿತಿಕೆ—ಒಳ್ಳೆಯದು. ಅದು ನಿನ್ನ ಕೆಲಸವೇ ತಾನೆ.

(ಇಬ್ಬರೂ ತೆರಳುವರು.)

**ಇದು ಪ್ರವೇಶಕ**

---

(ಬಳಿಕ ವಿರಹಾತುರನಾದ ರಾಜನು ವಿದೂಷಕನೊಡನೆ ಪ್ರವೇಶಿಸುವನು.)

ರಾಜ—(ತನ್ನನ್ನು ನೋಡಿಕೊಂಡು)

ನಲ್ಲೆಯನು ಬಿಗಿಯಪ್ಪಿಕೊಳುವ ಸೊಗವಿರದಂದು
ದೇಹವಿದು ಕಡುನೊಂದು ಸೊರಗಬಹುದು
ಕ್ಷಣಮಾತ್ರ ದರ್ಶನವುಮಿರದವೋಲಾದಂದು
ಕಂಗಳಿವು ಕಂಬನಿಯ ಮಿಡಿಯಬಹುದು
ಒಂದು ಚಣವಾದರೂ ಸಾರಂಗನೇತ್ರೆಯನು
ಅಗಲದವೊಲೇಗಳುಂ ತಳೆದು ನೀನು
ಪರಮಸಂಮೋದವನು ಪಡೆದುಮೆಂತೋ ಮನವೆ
ಬರಿದೆ ಮತ್ತೇಕೆ ಸಲೆ ತಪಿಸುತಿರುವೆ. ೧

ವಿದೂಷಕ—ಮಿತ್ರ, ಧೈರ್ಯವನ್ನು ತೊರೆದು ಈ ರೀತಿ ಪ್ರಲಪಿಸುವುದನ್ನು

ಸಾಕುಮಾಡು. ಮಾಳವಿಕೆಯ ಪ್ರಿಯಸಖಿ ಬಕುಳಾವಳಿಕೆಯನ್ನು ನಾನು ಕಂಡಿದ್ದೆ. ನೀನು ಹೇಳಿಕಳುಹಿಸಿದ್ದ ಸಂದೇಶವನ್ನು ಅವಳಿಗೆ ತಿಳಿಸಿದ್ದೇನೆ.

ರಾಜ—ಅದಕ್ಕೆ ಅವಳು ಏನು ಹೇಳಿದಳು ?

ವಿದೂಷಕ—'ಒಡೆಯರಿಗೆ ಬಿನ್ನವಿಸು. ಈ ನಿಯೋಗದಿಂದ ನಾನು ಅನುಗ್ರಹಿತಳಾದೆ. ಆದರೆ ಪಾಪ; ಅವಳು ನಾಗರಕ್ಷಿತ ನಿಧಿಯಂತೆ ದೇವಿಯಿಂದ ಇನ್ನೂ ಹೆಚ್ಚಿನ ನಿರ್ಬಂಧಕ್ಕೆ ಒಳಗಾಗಿದಾಳೆ. ಇದರಿಂದ ಅವಳನ್ನು ಕಾಣುವುದು ಕಷ್ಟವಾಗಿದೆ. ಆದರೂ ಪ್ರಯತ್ನಿಸುವೆನು' ಎಂದಳು.

ರಾಜ—ಓಹೋ ಪೂಜ್ಯನಾದ ಮನ್ಮಥನೆ, ಇಂತಹ ಅಡೆತಡೆಗಳಿರುವ ವಿಷಯಗಳಲ್ಲಿ ನನ್ನನ್ನು ಸಿಕ್ಕಿಸಿ ಕ್ಷಣಮಾತ್ರವೂ ಸಹಿಸಲಾಗದಂತೆ ಏಕೆ ಪ್ರಹರಿಸುತ್ತಿದ್ದೀಯೆ ?

ಹೃದಯವನು ಭೇದಿಸುವೊಲೆಸಗುವೀ ನೋವೆತ್ತ
 ನಂಬುಗೆಯ ಹೂಗಣೆಯದೆತ್ತ
ಮೃದು ತೀಕ್ಷ್ಣತರವೆಂದು ಪೇಳ್ದಪರದಾವುದನು
 ಘಟಿಸಿತದು ದಲ್ ನಿನ್ನೊಳತನು ! ೨

ವಿದೂಷಕ—ಮಿತ್ರ, ಕಾರ್ಯಸಾಧನೆಗಾಗಿ ನಾನು ಉಪಾಯವನ್ನು ಪ್ರಯೋಗಿಸಿರುವೆನೆಂದು ಆಗಲೇ ಹೇಳಲಿಲ್ಲವೇ ? ಸ್ವಲ್ಪ ಸಮಾಧಾನ ತಂದುಕೊ.

ರಾಜ—ಮಿತ್ರ, ನನ್ನ ಮನಸ್ಸು ಉಚಿತ ವ್ಯಾಪಾರಗಳಲ್ಲಿ ವಿಮುಖವಾಗಿರುವಾಗ ಉಳಿದಿರುವ ಈ ಹಗಲನ್ನು ಎಲ್ಲಿ ತಾನೆ ಕಳೆಯಲಿ ?

ವಿದೂಷಕ—ಏಕೆ ? ವಸಂತಾವತಾರ ಸೂಚಕಗಳಾದ ರಕ್ತಾಶೋಕಕೋರಕಗಳ ಉಪಾಯನವನ್ನು ರಾಣಿ ಇರಾವತಿ ನಿಪುಣಿಕೆಯ ಮೂಲಕ ನಿನಗೆ ಕಳುಹಿಸಿಕೊಟ್ಟು 'ಈ ಹೊಸ ವಸಂತಸಮಯದಲ್ಲಿ ಆರ್ಯಪುತ್ರನೊಡನೆ ಉಯ್ಯಾಲೆ ಆಡುವ ಉತ್ಸವವನ್ನು ಬಯಸುತ್ತೇನೆ' ಎಂದು ಈ ಮೊದಲೆ ಹೇಳಿ ಕಳುಹಿಸಿರಲಿಲ್ಲವೆ ? ನೀನು ಅವಳಿಗೆ

ಬರುವೆನೆಂದು ಮಾತುಕೊಟ್ಟದ್ದೆ. ಆದ್ದರಿಂದ ಈಗ ನಾವು ಪ್ರಮದ ವನಕ್ಕೆ ಹೋಗೋಣ.

ರಾಜ—ಅದು ಶಕ್ಯವಲ್ಲ.

ವಿದೂಷಕ—ಏಕೆ ?

ರಾಜ—ಮಿತ್ರ, ಸ್ತ್ರೀಯರು ನಿಸರ್ಗನಿಪುಣೆಯರು. ನಾನು ಮುದ್ದುಗೈಯುತ್ತಿದ್ದರೂ ನನ್ನ ಮನಸ್ಸು ಬೇರೆ ಕಡೆಯಲ್ಲಿ ನಾಟಿಕೊಂಡಿರುವುದೆಂದು ನಿನ್ನ ಸಖಿ ಕಂಡುಕೊಳ್ಳದೆ ಇರಳು. ಆದುದರಿಂದ ನನಗೆ ತೋರುವುದೇನೆಂದರೆ :

ತಕ್ಕುದಾದರು ಬೇಡಿದೊಲವನು ನೀಡದಿರುವುದೆ ಉಚಿತವೆನಿಪುದು
ಅದಕೆ ನಾನಿಂದೆನಿತೊ ಕಾರಣಗಳನು ತೋರಿಸಬಲ್ಲೆನು
ದಿಟದಿ ಮಾನಿನಿಜನರೊಳಿಂದಾನೊಲಿದು ಮುನ್ನಿಂದಧಿಕತರದುಪ
ಚಾರಗೈದರು ಭಾವಶೂನ್ಯವಿದೆನುವರಿಂತಹ ಸಮಯದೆ. ೩

ವಿದೂಷಕ—ಹೀಗೆ ನೀನು ರಾಣಿವಾಸದವರೆಲ್ಲರಲ್ಲಿಯೂ ಇರುವ ದಾಕ್ಷಿಣ್ಯವನ್ನು ಒಮ್ಮೆಗೇ ಕಳೆದುಕೊಳ್ಳುವುದು ಸರಿಯಲ್ಲ.

ರಾಜ—(ಆಲೋಚಿಸಿ) ಸರಿ, ಹಾಗಾದರೆ ಪ್ರಮದವನಕ್ಕೆ ದಾರಿತೋರಿಸು, ನಡೆ.

ವಿದೂಷಕ—ಹೀಗೆ, ಹೀಗೆ ಬರಬೇಕು. (ಇಬ್ಬರೂ ಮುಂದೆ ನಡೆಯುವರು.)

ವಿದೂಷಕ—ಇದೋ, ಗಾಳಿಗೆ ಅಲುಗುತ್ತಿರುವ ತನ್ನ ಚಿಗುರಿನ ಬೆರಳುಗಳಿಂದ ಈ ಪ್ರಮದವನ ಒಳಕ್ಕೆ ಬಾ ಎಂದು ನಿನ್ನನ್ನು ಆತುರಪಡಿಸುವಂತಿದೆ.

ರಾಜ—(ಸೋಂಕಿನ ಸೊಗವನ್ನು ರೂಪಿಸಿ) ಮಿತ್ರ, ನೋಡು, ವಸಂತೋದಯ ಬಹು ಸೊಗಸಾಗಿದೆಯಲ್ಲವೆ ?

ಮದಿಸಿ ಕುಕಿಲುವ ಕೇಳಲಿನಿದಹ ಕೋಗಿಲೆಯ ಸುಣ್ದನಿಯೊಳಿಂದು ವಸಂತನು
ಮದನತಾಪವ ಸಹಿಪೆಯೆಂತೆನುತೆನ್ನನನುತಾಪದೊಳು ಕೇಳ್ವವೊಲಿರ್ಪನು
ಮಾವಿನೆಳೆನನೆಗಂಪನೊಡವೆರೆದೊಯ್ಯನೈತಹ ತೆಂಕಣೆಲರಿನ ಸೋಂಕಿದು
ನನ್ನ ಮೈಯೊಳಗಿಂದು ಮಾಧವನೊಂದು ಮೃದುಕರಕರದ ಸೋಂಕಿನೊಲಿರ್ಪುದ

ವಿದೂಷಕ—ಮನಸ್ಸಿಗೆ ನೆಮ್ಮದಿಯಾಗುವುದು, ಪ್ರವೇಶಿಸು. (ಇಬ್ಬರೂ ಪ್ರವೇಶಿಸುವರು.) ವಯಸ್ಯ ! ಇದೊ, ಮನಸ್ಸಿಟ್ಟು ನೋಡು. ಈ

ಪ್ರಮದವನ ಲಕ್ಷ್ಮಿ ನಿನ್ನನ್ನು ಓಲೈಸಲೆಂದು ಯುವತಿಯರ ಅಲಂಕಾರವನ್ನೂ ನಾಚಿಸುವಂತಹ ವಸಂತಕುಸುಮನೇಪಥ್ಯದಿಂದ ಶೋಭಿಸುತ್ತಿದಾಳೆ.

ಕೆಂಪಿನಸುಗೆಯ ಹೊಳಪು ಗೆಲಿದಿರೆ ತೊಂಡೆವಣ್ಣುಟಿ
ಯಲತಿಗೆಯ ಪೊಸಗೆಂಪನು
ಕಪ್ಪು ಬಿಳಿಕೆಂಪೆಸೆವ ಗೋರಟೆಯುಲರು ಗೆಲಿದಿರೆ
ಕೆನ್ನೆ ಬಳ್ಳಿಯಲಂಪನು
ಅಳಿಯ ಕಾಡಿಗೆವೆರೆದ ತಿಲಕದ ಹೂವು ಗೆಲಿದಿರೆ
ತಿಲಕ ಮೆರೆಯುವ ಹಣೆಯನು
ಆಹ ಬನಸಿರಿ ಮೆರೆವಳಣಕಿಸಿ ಮೊಗವ ಸಿಂಗರ
ಗೊಳಿಪ ಪೆಣ್ಗಳ ಕಲೆಯನು. ೫

(ಇಬ್ಬರೂ ಉದ್ಯಾನವನಶೋಭೆಯನ್ನು ನಿರೂಪಿಸುವರು. ಬಳಿಕ ಪರ್ಯುತ್ಸುಕಳಾದ ಮಾಳವಿಕೆ ಬರುವಳು.)

ಮಾಳವಿಕೆ—ಎರೆಯನ ಮನಸ್ಸನ್ನು ಅರಿಯದೆ ಆತನನ್ನು ಬಯಸುತ್ತಿರುವ ನನ್ನ ವಿಷಯದಲ್ಲಿ ನನಗೇ ನಾಚಿಕೆಯಾಗಿದೆ. ಈ ಸಂಗತಿಯನ್ನು ಸ್ನಿಗ್ಧಸಖೀಜನದೊಂದಿಗೆ ಹೇಳಿಕೊಳ್ಳುವ ಭಾಗ್ಯವೂ ನನಗಿಲ್ಲವಾಗಿದೆ. ಪ್ರತಿಕ್ರಿಯೆಯೇ ಇಲ್ಲದ ಈ ವೇದನೆಯಿಂದ ಮದನನು ನನ್ನನ್ನು ಇನ್ನೆಷ್ಟು ಕಾಲ ಪೀಡಿಸುವನೋ ತಿಳಿಯದು. (ಕೆಲವು ಹೆಜ್ಜೆ ನಡೆದು) ನಾನೆಲ್ಲಿಗೆ ಹೊರಟಿದೇನೆ? (ಯೋಚಿಸಿ) ಆ! 'ಮಾಳವಿಕೆ, ಗೌತಮನ ಚೇಷ್ಟೆಯ ಪರಿಣಾಮವಾಗಿ ತೂಗುಯ್ಯಾಲೆಯಿಂದ ಬಿದ್ದು ನನ್ನ ಕಾಲುಗಳಿಗೆ ನೋವಾಗಿದೆ. ಆದುದರಿಂದ ನೀನು ಆ ಸ್ವರ್ಣಾಶೋಕಕ್ಕೆ ದೋಹದವನ್ನು ನಡೆಸು. ಅದು ಇನ್ನು ಐದು ದಿನಗಳ ಒಳಗೇ ಹೂದೋರಿದರೆ ನಿನ್ನ (ಬಿಸುಸುಯ್ದು) ಅಭಿಲಾಷೆಯನ್ನು ಪೂರೈಸುವ ಬಹುಮಾನವನ್ನು ನಿನಗೆ ಕೊಡುತ್ತೇನೆ' ಎಂದು ದೇವಿ ನನಗೆ ಅಪ್ಪಣೆ ಮಾಡಿದಾಳೆಯಲ್ಲವೆ? ಆದುದರಿಂದ ಮೊದಲು ಈ ಕೆಲಸ ನಡೆಯಬೇಕಾದ ಆ ಅಶೋಕವಿರುವಲ್ಲಿಗೇ ಹೋಗುವೆನು. ನನ್ನ ಚರಣಾಲಂಕಾರಸಾಮಗ್ರಿಗಳೊಡನೆ ಇನ್ನೇನು ಬಕುಳಾವಳಿಕೆ ಬಂದೇಬಿಡುವಳು. ಅಷ್ಟರೊಳಗೆ ಹಾಯಾಗಿ ನನ್ನ ಸಂಕಟವನ್ನು

ತೋಡಿಕೊಳ್ಳುವೆನು. (ಮುಂಬರಿಯುವಳು.)

ವಿದೂಷಕ—(ನೋಡಿ) ಹಿ-ಹ್ಹಿ-ಹ್ಹೀ! ಕಳ್ಳು ಕುಡಿದು ಅಮಲೇರಿದವನಿಗೆ ಕಲ್ಲುಸಕ್ಕರೆಯೇ ಸಿಕ್ಕಂತಾಯಿತು.

ರಾಜ—ಹುಂ, ಹುಂ! ಏನದು!

ವಿದೂಷಕ—ಇದೊ, ಈ ಮಾಳವಿಕೆ ಹೆಚ್ಚಿನ ಆಭರಣಗಳೇನನ್ನೂ ಧರಿಸದೆ ಪರ್ಯುತ್ಸುಕಳಾಗಿ ಏಕಾಕಿನಿಯಾಗಿ ನಮ್ಮ ಬಳಿಯಲ್ಲಿಯೇ ಕಾಣುತ್ತಿರುವಳು.

ರಾಜ—(ಹರ್ಷದಿಂದ) ಏನು, ಮಾಳವಿಕೆಯೆ?

ವಿದೂಷಕ—ಮತ್ತಾರು?

ರಾಜ—ಇದೀಗ ನನ್ನ ಜೀವನಕ್ಕೆ ಆಲಂಬನ ಸಿಕ್ಕಿದಂತಾಯಿತು.

ಸಾರಸದ ರವದಿಂದೆ ತರುವೃತ ಸರವನರಿತಿಹ ತೃಷಿತಪಾಂಥನ ಬಗೆಯೊಲು
ಬವಣೆಯಿಂ ಚೇತರಿಸಿತೀಬಗೆ ತಿಳಿದು ನಿನ್ನಿಂ ಬಳಿಯೊಳಿಹಳೆಂದಿನಿಯಳು. ೬

ವಿದೂಷಕ—ಈಕೆ ಈ ಮರಗಳ ಸಾಲಿನ ಮಧ್ಯದಿಂದ ಈ ಕಡೆಗೇ ಬರುವಂತಿದೆ.

ರಾಜ—ವಯಸ್ಯ, ನೋಡುತ್ತಿದೇನೆ.

ಅಸಿನಡುವಿನವಳುಬ್ಬಿದೆದೆಯವಳು ತೋರವೊರವಾರಿನವಳಿವಳು
ತಾನಿತ್ತಲೈತಹಳು ನನ್ನ ಜೀವಿತಮಿವಳು ಬೊಗಸೆಗಣ್ಣವಳು. ೭

ಮಿತ್ರ, ಮೊದಲಿಗೂ ಈಗ್ಗೂ ಈಕೆಯ ಸ್ಥಿತಿ ಹೇಗೆ ಮಾರ್ಪಟ್ಟಿದೆ! ನೋಡು—

ಕೆಲವೆ ತೊಡವುಗಳಿಂದಲೊಪ್ಪುತೆ ನೊದೆಯ ಕಾಡೆಯ
ಬೆಳ್ಪನಾಂತಿಹ ಕೆನ್ನೆಯವಳಿವಳು
ಕೆಲವೆ ಹೂವುಗಳಿಂದಲೊಪ್ಪುವ ಸುಗ್ಗಿ ಪಣ್ಬೈದೆಲೆಯ
ಮೊಲ್ಲೆಯ ಬಳ್ಳಿವೋಲಿಹಳು. ೮

ವಿದೂಷಕ—ನಿನ್ನಂತೆಯೇ ಇವಳಿಗೂ ಮದನವ್ಯಾಧಿ ಹಿಡಿದಂತಿದೆ.

ರಾಜ—ನಿನ್ನ ಸೌಹಾರ್ದವೇ ಹೀಗೆ ಕಾಣುತ್ತಿದೆ.

ಮಾಳವಿಕೆ—ಸುಕುಮಾರದೋಹದವನ್ನು ಅಪೇಕ್ಷಿಸುತ್ತ ಕುಸುಮಾಲಂಕಾರ

ಗಳೇನೂ ಇಲ್ಲದೆ ಉತ್ಕಂಠಿತಳಾದ ನನ್ನನ್ನೇ ಹೋಲುತ್ತ ಇರುವ ಅಶೋಕವೃಕ್ಷ ಇದೇ. ಇದರ ದಟ್ಟವಾದ ನೆರಳಿನಲ್ಲಿ ತಣ್ಣಗಿರುವ ಈ ಬಂಡೆಯ ಮೇಲೆ ಸ್ವಲ್ಪ ಹೊತ್ತು ಕುಳಿತು ವಿನೋದಪಡುತ್ತೇನೆ.

ವಿದೂಷಕ—ಕೇಳಿದೆಯಾ ? 'ಉತ್ಕಂಠಿತಳಾಗಿದ್ದೇನೆ' ಎಂದಳು ಈಕೆ.

ರಾಜ—ಇಷ್ಟರಿಂದಲೇ ನಿನ್ನ ಊಹೆ ಸರಿಯೆಂದು ನಾನು ತಿಳಿಯಲಾರೆ. ಏಕೆಂದರೆ—

ಕುರವದಲರ ಹುಡಿಯನಾಂತು ತಳೆದು ಬಿರಿವ ಕುಡಿಯ ಸೀರ್ಪನಿಗಳನು
ಮಲಯದೆಲರಿದೊಗೆಯಿಸುತ್ತಲಿಹುದು ಕೆಮ್ಮನೆನ್ನೊಳುತ್ಸಕತೆಯನು. ೯

(ಮಾಳವಿಕೆ ಕುಳಿತುಕೊಳ್ಳುವಳು.)

ರಾಜ—ವಯಸ್ಯ, ಹೀಗೆ ಬಾ. ನಾವು ಬಳ್ಳಿಯ ಮರೆಯಲ್ಲಿರೋಣ.

ವಿದೂಷಕ—ಸಮೀಪದಲ್ಲಿಯೇ ಇರಾವತಿಯೂ ಇರುವಂತೆ ಕಾಣುತ್ತದೆ.

ರಾಜ—ಕಮಲಿನಿಯನ್ನು ಕಂಡ ಮತಂಗಜ ಮೊಸಳೆಯನ್ನು ಲಕ್ಷಿಸದಷ್ಟೆ ! (ನೋಡುತ್ತ ನಿಲ್ಲುವನು.)

ಮಾಳವಿಕೆ—ಹೃದಯವೆ, ಆಲಂಬನವಿಲ್ಲದ ಮನೋರಥವನ್ನು ದೂರ ಮಾಡು. ನನ್ನನ್ನು ಏಕೆ ಆಯಾಸಗೊಳಿಸುವೆ ?

(ವಿದೂಷಕನು ರಾಜನನ್ನು ನೋಡುವನು)

ರಾಜ—(ತನಗೆ ತಾನೆ) ಪ್ರಿಯೆ, ಸ್ನೇಹದ ವೈಷಮ್ಯವನ್ನು ನೋಡು-

ಔತ್ಸುಕ್ಯಕಾರಣವ ನೀನೊರೆಯದಾದೆ
ತರ್ಕದಿಂದುದಯಿಸದು ತತ್ವಾವಬೋಧೆ
ನಿನ್ನೆಲ್ಲ ದುಃಖಗಳಿಗಿಂದು ರಂಭೋರು !
ನಾನೇ ನಿಮಿತ್ತವೆಂದೂಹಿಸುವೆ ಭೀರು ! ೧೦

ವಿದೂಷಕ—ಈಗ ನಿನ್ನ ಸಂಶಯವೆಲ್ಲವೂ ದೂರವಾಗುವುದು. ನಿನ್ನ ಮದನ ಸಂದೇಶವನ್ನು ನಾನು ಯಾರಲ್ಲಿ ನಿವೇದಿಸಿದೆನೋ ಆ ಬಕುಳಾವಳಿ ಕೆಯೇ ಈ ಏಕಾಂತಸ್ಥಳಕ್ಕೆ ಬರುತ್ತಿದಾಳೆ.

ರಾಜ—ನನ್ನ ಪ್ರಾರ್ಥನೆಯನ್ನು ಸ್ಮರಿಸಿಯಾಳೆ ! ಏನು ?

ವಿದೂಷಕ—ಈ ತೊತ್ತಿನ ಮಗಳು ಇಂತಹ ಗುರುಸಂದೇಶವನ್ನು ಮರೆ ತಾಳೆಯೇ ? ನಾನು ಕೂಡ ಅದನ್ನು ಮರೆತಿಲ್ಲ.

(ಬಳಿಕ ಚರಣಾಲಂಕಾರಸಾಮಗ್ರಿಗಳನ್ನು ತೆಗೆದುಕೊಂಡು ಬಕುಳಾವಳಿಕೆ ಪ್ರವೇಶಿಸುವಳು.)

ಬಕುಳಾವಳಿಕೆ—ಸಖಿ, ಸೌಖ್ಯವೆ?

ಮಾಳವಿಕೆ—ಓ, ಬಕುಳಾವಳಿಕೆ! ಸಖಿ, ನಿನಗೆ ಸ್ವಾಗತ, ಕುಳಿತುಕೊ.

ಬಕುಳಾವಳಿಕೆ—(ಕುಳಿತು) ನೀನು ಇದಕ್ಕೆ ಯೋಗ್ಯಳೆಂದೇ ದೇವಿ ನಿನಗೆ ಈ ಕಾರ್ಯವನ್ನು ನೇಮಿಸಿರುವಳು. ಆದುದರಿಂದ ನಿನ್ನ ಒಂದು ಕಾಲನ್ನು ಇತ್ತ ನೀಡು. ಅಲತಿಗೆ ಹಚ್ಚಿ ನೂಪುರ ಇಡುತ್ತೇನೆ.

ಮಾಳವಿಕೆ—(ತನಗೆ ತಾನೆ) ಹೃದಯವೆ, ಈ ವಿಭವ ಒದಗಿತೆಂದು ಹಿಗ್ಗದಿರು. ನಾನು ಇದನ್ನು ನೆರವೇರಿಸಿ ಹೇಗೆ ಪಾರಾದೇನು? ಪಾರಾಗದಿದ್ದರೆ ಇದೇ ನನಗೆ ಮೃತ್ಯುಮಂಡನವಾಗುತ್ತದೆ.

ಬಕುಳಾವಳಿಕೆ—ಏಕೆ ವಿಚಾರಪರಳಾದೆ? ಈ ಚಿನ್ನದ ಅಸುಗೆ ಹೂವಿಡುವುದರಲ್ಲಿ ದೇವಿ ತುಂಬ ಕಾತರಳಾಗಿದ್ದಾಳೆ.

ರಾಜ—ಏನು, ಅಶೋಕದೋಹದ ನಿಮಿತ್ತವಾಗಿಯೇ ಈ ಆರಂಭ?

ವಿದೂಷಕ—ಏಕೆ, ನಿನಗೆ ತಿಳಿಯದೆ? ಕಾರಣವಿಲ್ಲದೆ ದೇವಿ ಈ ಅಂತಃಪುರಾಲಂಕಾರಗಳನ್ನು ಈಕೆಗೆ ತೊಡಿಸುವುದಿಲ್ಲ ಎಂಬುದು.

ಮಾಳವಿಕೆ—(ಕಾಲನ್ನು ನೀಡಿ) ಈ ಅಪರಾಧವನ್ನು ಕ್ಷಮಿಸು, ಸಖಿ.

ಬಕುಳಾವಳಿಕೆ—ಸಖಿ, ನನ್ನ ಶರೀರವೇ ನೀನು. (ನಾಟ್ಯದಿಂದ ಚರಣಾಲಂಕಾರ ಮಾಡತೊಡಗುವಳು.)

ರಾಜ—

ಗೆಳೆಯ ನೋಡಿದೊ ನಲ್ಲೆಯಡಿಯೊಳು ರಾಗರೇಖೆಯ ತೇವದಲತಿಗೆಯ
ಹರನು ಸುಟ್ಟ ಮನೋಭವದ್ರುಮದಾದಿ ಪಲ್ಲವದೊಂದು ಹೋಲುವೆಯ. ೧೧

ವಿದೂಷಕ—ಈ ಪೂಜ್ಯಳ ಚರಣಕ್ಕೆ ಅನುರೂಪವಾದ ಕಾರ್ಯವನ್ನೇ ದೇವಿ ಈಕೆಗೆ ನೇಮಿಸಿರುವಳು.

ರಾಜ—ಚೆನ್ನಾಗಿ ಹೇಳಿದೆ—

ಉಗುರಹೊಳಹಿನ ಹೊಗರಿನಿಂದೆಸೆವೆಳೆಯ ಕೆಂದಳಿರಡಿಯಿ-
ನೆರಡುಮನೀಕೆಯೊದೆಯುವೊಡಿಂದು ಯುಕ್ತಮದಪ್ಪುದು.

ದೋಹದೇಚ್ಛೆಯಿನಲರ ತೋರದಶೋಕತರು ತಾನೊಂದು
ಮೇಣಾದ್ರ್ರಾಪರಾಧಿಯೆನಿಪ್ಪ ಕಾಂತನ ನಮಿತಶಿರವೊಂದು. ೧೨

ವಿದೂಷಕ—ಬಹುಬೇಗ ನೀನು ಯಾವುದಾದರೂ ಅಪರಾಧವನ್ನು ಮಾಡಿಯೇ ಮಾಡುವೆ. ಪೂಜ್ಯಳೂ ಪ್ರಹರಿಸದೆ ಬಿಡಳು.

ರಾಜ—ಸಿದ್ಧದರ್ಶಿಯಾದ ಬ್ರಾಹ್ಮಣವಚನವನ್ನು ಶಿರಸಾಪ್ರತಿಗ್ರಹಿಸಿದ್ದೇನೆ.

(ಬಳಿಕ ಪ್ರಮತ್ತಳಾದ ಇರಾವತಿಯೂ ಚೇಟಿಯೂ ಪ್ರವೇಶಿಸುವರು.)

ಇರಾವತಿ—ಸಖಿ, ನಿಪುಣಿಕೆ, ಸ್ತ್ರೀಯರಿಗೆ ಮದ ವಿಶೇಷಭೂಷಣವೆಂದು ಅನೇಕಸಲ ಕೇಳಿದೇನೆ. ಈ ನಾಣ್ಣುಡಿ ನಿಜವೇನೆ?

ನಿಪುಣಿಕೆ—ಮೊದಲು ಅದು ಕೇವಲ ನಾಣ್ಣುಡಿಯೇ ಆಗಿದ್ದಿತು. ಈಗ ನಿಜವೇ ಆಯಿತು.

ಇರಾವತಿ—ನನ್ನ ಮೇಲಣ ಈ ಸ್ನೇಹ ಸಾಕು. ಒಡೆಯನು ಮೊದಲೇ ಉಯ್ಯಾಲೆಮನೆಗೆ ಹೊರಟನೆಂಬುದು ನಿನಗೆ ಹೇಗೆ ಗೊತ್ತಾಯಿತು?

ನಿಪುಣಿಕೆ—ಒಡತಿಯ ಮೇಲಣ ಅಖಂಡಪ್ರೇಮದಿಂದ.

ಇರಾವತಿ—ಸಾಕು, ಈ ಸೇವೆಯ ಮಾತು. ಮಧ್ಯಸ್ಥಳಾಗಿ ಹೇಳು.

ನಿಪುಣಿಕೆ—ವಸಂತೋಪಾಯನಲೋಲುಪನಾದ ಆರ್ಯ ಗೌತಮನಿಂದ ಗೊತ್ತಾಯಿತು. ಒಡತಿ, ಬೇಗಬೇಗ ನಡೆ.

ಇರಾವತಿ—(ಅವಸ್ಥೆಗೆ ತಕ್ಕಂತೆ ನಡೆಯುತ್ತ) ಸಖಿ, ಮದದಿಂದ ಮ್ಲಾಯಮಾನಳಾದ ನನ್ನನ್ನು ಆರ್ಯಪುತ್ರನ ದರ್ಶನಕ್ಕಾಗಿ ಹೃದಯವು ತ್ವರೆಗೊಳಿಸುತ್ತಿದೆ. ಕಾಲುಗಳಾದರೋ ಆ ದಿಸೆಯಲ್ಲಿ ನಡೆಯಲೊಲ್ಲವು.

ನಿಪುಣಿಕೆ—ಇನ್ನೇನು, ಉಯ್ಯಾಲೆಮನೆಗೆ ಬಂದೇಬಿಟ್ಟೆವು.

ಇರಾವತಿ—ನಿಪುಣಿಕೆ, ಇಲ್ಲಿ ಆರ್ಯಪುತ್ರನು ಕಾಣುವುದಿಲ್ಲವಲ್ಲ!

ನಿಪುಣಿಕೆ—ಒಡತಿ, ಸುತ್ತ ನೋಡು. ಒಡೆಯನು ಪರಿಹಾಸ ನಿಮಿತ್ತವಾಗಿ ಎಲ್ಲಿಯಾದರೂ ಅವಿತುಕೊಂಡಿರಬಹುದು. ನಾವೂ ಕೂಡ ಈ ಪ್ರಿಯಂಗುಲತೆ ಬಳಸಿರುವ ಅಶೋಕದಡಿಯ ಕಲ್ಲುಮಂಚದ ಮೇಲೆ ಕುಳಿತುಕೊಳ್ಳೋಣ.

(ಇರಾವತಿ ಹಾಗೆಯೇ ಮಾಡುವಳು)

ನಿಪುಣಿಕೆ—(ಅತ್ತಿತ್ತ ಓಡಾಡಿ ನೋಡಿ) ಒಡತಿ, ನೋಡು. ಮಾವಿನ ಚಿಗುರನ್ನು ಹುಡುಕುತ್ತಿರುವ ನಮಗೆ ಇರುವೆ ಕಡಿಯಿತು.

ಇರಾವತಿ—ಏನದು ?

ನಿಪುಣಿಕೆ—ಈ ಬಕುಳಾವಳಿಕೆ ಅಶೋಕವೃಕ್ಷದ ನೆರಳಿನಲ್ಲಿ ಮಾಳವಿಕೆಗೆ ಚರಣಾಲಂಕಾರ ಮಾಡುತ್ತಿರುವಳು.

ಇರಾವತಿ—(ಶಂಕೆಯನ್ನು ನಟಿಸಿ) ಮಾಳವಿಕೆ ಬರತಕ್ಕ ಸ್ಥಳವಲ್ಲ ಇದು. ನೀನೇನು ಹೇಳುವೆ ?

ನಿಪುಣಿಕೆ—ಉಯ್ಯಾಲೆಯಿಂದ ಜಾರಿ ಬಿದ್ದು ಕಾಲು ಉಳುಕಿರುವುದರಿಂದ ದೇವಿ ಅಶೋಕವೃಕ್ಷದ ದೋಹದಕ್ಕಾಗಿ ಮಾಳವಿಕೆಗೆ ಅಪ್ಪಣೆ ಮಾಡಿರುವಳೆಂದು ನನಗೆ ತೋರುತ್ತದೆ. ಅದಿಲ್ಲದಿದ್ದರೆ ತಾನು ಧರಿಸುವ ನೂಪುರಗಳನ್ನು ದೇವಿ ಪರಿಜನಕ್ಕೆ ಕೊಡುತ್ತಿದ್ದಳೆ ?

ಇರಾವತಿ—ಇದು ಇವಳಿಗೆ ಮಹತ್ವಪೂರ್ಣವಾದ ಸಂಭಾವನೆಯೇ ಸರಿ.

ನಿಪುಣಿಕೆ—ಆದರೆ ನಾವೇಕೆ ಮತ್ತೆ ಒಡೆಯನನ್ನು ಹುಡುಕಬಾರದು ?

ಇರಾವತಿ—ಸಖಿ, ನನ್ನ ಹೆಜ್ಜೆ ಬೇರೆ ಕಡೆಗೆ ಹೋಗಲೇ ಒಲ್ಲದು. ನನ್ನ ಬಗೆ ಕೂಡ ಕಳವಳಗೊಂಡಿದೆ. ಮೊದಲು ನಾನು ಕಳವಳವನ್ನು ಪರಿಹರಿಸಿಕೊಳ್ಳುವೆನು ; (ಮಾಳವಿಕೆಯನ್ನು ನೋಡಿ, ತನಗೆ ತಾನೆ) ನಿಜ, ನನ್ನ ಹೃದಯ ಕಾತರಗೊಳ್ಳುವುದು ಯುಕ್ತವೇ.

ಬಕುಳಾವಳಿಕೆ—(ಚರಣವನ್ನು ಅಲಂಕರಿಸುತ್ತ) ಸಖಿ, ಮಾಳವಿಕೆ, ನೋಡು, ಈ ಚರಣರಾಗರೇಖಾವಿನ್ಯಾಸ ನಿನಗೆ ಒಪ್ಪಿಗೆಯಾಗಿದೆಯೇ ?

ಮಾಳವಿಕೆ—ಇದು ನನ್ನ ಚರಣಕ್ಕೇ ಮಾಡಿರುವುದಾದ್ದರಿಂದ ಹೊಗಳಲು ನಾಚಿಕೆಯಾಗುತ್ತಿದೆ. ಸಖಿ, ನೀನು ಈ ಪ್ರಸಾಧನಕಲೆಯನ್ನು ಯಾರಿಂದ ಕಲಿತೆ ?

ಬಕುಳಾವಳಿಕೆ—ನಾನು ಈ ಕಲೆಯಲ್ಲಿ ಮಹಾರಾಜನ ಶಿಷ್ಯೆ.

ವಿದೂಷಕ—ವಯಸ್ಯ, ಈಗ ನೀನು ತ್ವರೆಮಾಡು, ಗುರುದಕ್ಷಿಣೆ ಕೇಳು.

ಮಾಳವಿಕೆ—ಗರ್ವಪಡದಿರುವುದು ನನಗೆ ಸಂತೋಷ.

ಬಕುಳಾವಳಿಕೆ—ಉಪದೇಶಾನುರೂಪವಾದ ಚರಣ ಸಿಕ್ಕಿತೆಂದು ಈಗ ನಾನು

ಗರ್ವಪಡುತ್ತೇನೆ. (ತನಗೆ ತಾನೆ) ಆಹಾ! ನನ್ನ ದೌತ್ಯ ಸಿದ್ಧಿಸಿತು. (ರಾಗವನ್ನು ನೋಡಿ ಗಟ್ಟಿಯಾಗಿ) ಸಖಿ, ನಿನ್ನ ಒಂದು ಚರಣಕ್ಕೆ ಅಲತಿಗೆ ಹಚ್ಚಿಯಾಯಿತು; ಬಾಯಿಂದ ಊದಿ ಆರಿಸಬೇಕಷ್ಟೆ. ಇಷ್ಟಕ್ಕೂ ಇಲ್ಲಿ ಗಾಳಿಯಾಡುತ್ತಲೇ ಇದೆಯಲ್ಲವೇ?

ರಾಜ—ಮಿತ್ರ, ನೋಡು, ನೋಡು.

ಬಾಯ ಗಾಳಿಯನೂದುತಲತಿಗೆ ಹಸಿಯಿನೆನೆವಿವಳಡಿಯನು
ನೇವಿಸುವ ಪ್ರಥಮಾವಕಾಶವಿದಿಂತು ದೊರಕಿಹುದೆನುವೆನು. ೧೩

ವಿದೂಷಕ—ಚಿಂತೆಯೇಕೆ? ಚಿರಕಾಲ ಸೀನಿದನ್ನು ಕ್ರಮವಾಗಿ ಅನುಭವಿಸುವೆ.

ಬಕುಳಾವಳಿಕೆ—ಸಖಿ, ಅರುಣಶತಪತ್ರದಂತೆ ನಿನ್ನ ಚರಣ ಶೋಭಿಸುತ್ತಿದೆ. ಸರ್ವಥಾ ಭರ್ತನ ಅಂಕವನ್ನು ಅಲಂಕರಿಸುವವಳಾಗು.

(ಇರಾವತಿ ನಿಪುಣಿಕೆಯ ಮುಖ ನೋಡುವಳು.)

ರಾಜ—ನನಗೆ ಇದು ಆಶೀರ್ವಾದ.

ಮಾಳವಿಕೆ—ಏನೆ, ಆಡಬಾರದ್ದನ್ನು ಆಡಿದೆಯಲ್ಲೆ!

ಬಕುಳಾವಳಿಕೆ—ಆಡಬೇಕಾದ್ದನ್ನೇ ಆಡಿದೆ, ಸಖಿ.

ಮಾಳವಿಕೆ—ನಾನು ನಿನಗೆ ಪ್ರಿಯಳಲ್ಲವೇನೆ?

ಬಕುಳಾವಳಿಕೆ—ನನಗೆ ಮಾತ್ರವಲ್ಲ.

ಮಾಳವಿಕೆ—ಮತ್ತಿನ್ನಾರಿಗೆ?

ಬಕುಳಾವಳಿಕೆ—ಗುಣದಿಂದ ಆಕರ್ಷಕನಾದ ಒಡೆಯನಿಗೂ.

ಮಾಳವಿಕೆ—ಸುಳ್ಳುಸುಳ್ಳೇ ಹೇಳುತ್ತಿದೀಯೆ. ಗುಣವೇ ನನ್ನಲ್ಲಿಲ್ಲದಿರುವುದು.

ಬಕುಳಾವಳಿಕೆ—ನಿಜ, ನಿಜ, ನಿನ್ನಲ್ಲಿಲ್ಲ ಅದು. ಆ ಗುಣ, ಕೃಶವಾಗಿರುವ ಒಡೆಯನ ಸುಂದರಪಾಂಡುರವಾದ ಅಂಗಗಳಲ್ಲಿ ಕಾಣುತ್ತಿದೆ.

ನಿಪುಣಿಕೆ—ಈ ಹಾಳಾದವಳು ಹೇಗೆ ಮೊದಲೇ ಕಲಿತು ಪಾಠ ಒಪ್ಪಿಸುವಂತೆ ಆಡುತ್ತಿದಾಳೆ!

ಬಕುಳಾವಳಿಕೆ—ಅನುರಾಗವನ್ನು ಅನುರಾಗದಿಂದಲೇ ಪರೀಕ್ಷಿಸಬೇಕೆಂಬ ಸುಜನವಚನವನ್ನು ಪ್ರಮಾಣವೆಂದು ಅಂಗೀಕರಿಸು.

ಮಾಳವಿಕೆ—ಸಖಿ, ಇದೇನು, ನಿನಗೆ ತೋರಿದಂತೆ ಈ ಮಾತುಗಳನ್ನು ಹೇಳುತ್ತಿದೀಯೋ ?

ಬಕುಳಾವಳಿಕೆ—ಅಲ್ಲ, ಅಲ್ಲ. ಪ್ರಣಯದಿಂದ ಮೃದುವಾದ ಈ ಮಾತು ನನ್ನ ಬಾಯಿಂದ ಬಂದ ಒಡೆಯನ ಮಾತುಗಳು ಎಂದು ತಿಳಿ.

ಮಾಳವಿಕೆ—ಸಖಿ, ದೇವಿಯನ್ನು ನೆನೆದು ನನ್ನ ಹೃದಯ ಇದನ್ನು ನಂಬಲಾರದೆ ಇದೆ.

ಬಕುಳಾವಳಿಕೆ—ಓ ಮುಗ್ಧೆ ! ಭ್ರಮರ ಸಂಬಾಧೆ ಎಂದು ವಸಂತಾವತಾರ ಸರ್ವಸ್ವವಾದ ಮಾವಿನ ಚಿಗುರನ್ನು ಅವತಂಸವಾಗಿ ಮುಡಿಯಬಾರದೇನು ?

ಮಾಳವಿಕೆ—ಈ ಇಕ್ಕಟ್ಟಿನಲ್ಲಿ ನೀನೇ ನನಗೆ ಅತ್ಯಂತ ಸಹಾಯಕಳಾಗಿ ನಿಲ್ಲಬೇಕು.

ಬಕುಳಾವಳಿಕೆ—ಎಷ್ಟೆಷ್ಟು ನಲುಗಿಸಿದರೆ ಅಷ್ಟಷ್ಟು ಪರಿಮಳಿಸುವ ಬಕುಳಾವಳಿಕೆಯಲ್ಲವೆ ನಾನು ?

ರಾಜ—ಸಾಧು, ಬಕುಳಾವಳಿಕೆ, ಸಾಧು.

ಭಾವವನು ಮೊದಲರಿತು ಬಳಿಕಂತೆ ತಾ ನುಡಿದು
ಪಡಿನುಡಿಯೊಳವಳೆಲ್ಲ ದೂಷಣೆಯ ಗೆಲಿದು
ತನ್ನ ವಶಗೈದಿರುವಳಂಗನೆಯನಿವಳಿನಲು
ದೂತಿಯರಧೀನ ದಲ್ ಕಾಮಿಜನರುಸಿರು. ೧೪

ಇರಾವತಿ—ಸಖಿ, ನೋಡು, ನೋಡು. ಈ ಸಂಬಂಧದಲ್ಲಿ ಬಕುಳಾವಳಿಕೆ ಮಾಳವಿಕೆಯನ್ನು ಇನ್ನೊಂದು ಹೆಜ್ಜೆ ಮುಂದಿಡುವಂತೆ ಮಾಡಿದಳು.

ನಿಪುಣಿಕೆ—ಒಡತಿ, ಇಂತಹ ಉಪದೇಶ ಮನೋವಿಕಾರವಿಲ್ಲದವರಿಗೂ ಔತ್ಸುಕ್ಯವನ್ನು ಹುಟ್ಟಿಸುತ್ತದೆ.

ಇರಾವತಿ—ನನ್ನ ಹೃದಯವು ಶಂಕಿಸಿದ್ದು ಯುಕ್ತವಾಗಿಯೇ ಇದೆ. ವಿಷಯವೆಲ್ಲವನ್ನೂ ತಿಳಿದುಕೊಂಡಮೇಲೆ ಮಾಡತಕ್ಕದ್ದನ್ನು ಆಲೋಚಿಸುವೆನು.

ಬಕುಳಾವಳಿಕೆ—ನಿನ್ನ ಇನ್ನೊಂದು ಚರಣವನ್ನು ಅಲಂಕರಿಸುವ ಕಾರ್ಯವೂ ಮುಗಿಯಿತು. ಈಗ ಎರಡು ಚರಣಗಳಿಗೂ ನೂಪುರಗಳನ್ನು ತೊಡಿಸು

ವೆನು. (ನಾಟ್ಯದಿಂದ ನೂಪುರಗಳನ್ನು ತೊಡಿಸುವಳು.) ಸಖಿ, ಏಳು. ಅಶೋಕತರು ಹೂಬಿಡುವಂತೆ ದೇವಿಯ ಅಪ್ಪಣೆಯನ್ನು ನೆರವೇರಿಸು.

(ಇಬ್ಬರೂ ಏಳುವರು.)

ಇರಾವತಿ—ಹಾಗಾದರೆ ಇದು ದೇವಿಯ ನಿಯೋಗವೆಂಬುದನ್ನು ನಾವು ಕೇಳಿದೆವಷ್ಟೆ.

ಬಕುಳಾವಳಿಕೆ—ರಾಗಾಧಿಕವೂ ಉಪಯೋಗಕ್ಷಮವೂ ಆದುದು ನಿನ್ನೆದುರಿಗೇ ಇದೆ.

ಮಾಳವಿಕೆ—(ಸಂತೋಷದಿಂದ) ಏನು ? ಮಹಾರಾಜನೆ ?

ಬಕುಳಾವಳಿಕೆ—(ನಸುನಕ್ಕು) ಭರ್ತನಲ್ಲ. ಸಖಿ, ಅಶೋಕದ ಹರೆಯಲ್ಲಿ ಜೋಲಾಡುತ್ತಿರುವ ಚಿಗುರು ಜೊಂಪೆ. ಇದನ್ನು ಅವತಂಸವನ್ನಾಗಿ ಮಾಡಿಕೊ.

ವಿದೂಷಕ—ಮಿತ್ರ, ಕೇಳಿದೆಯಾ ?

ರಾಜ—ವಯಸ್ಯ, ಕಾಮಿಗಳಿಗೆ ಇಷ್ಟು ಸಾಕು.

ವಿರಹದ ನಿರಾಶೆಯೊಳು ಸದೃಶಾನುರಾಗಿಗಳು
ವ್ಯೆಯುಳಿವುದುಂ ಮಿಗಿಲು ವಿರಹದಿಂದೆ
ಆತುರರನಾತುರರೊಳಾದರು ಸಮಾಗಮವು
ರತಿಯೆಂದು ನಾನದನು ಪರಿಗಣಿಸೆನು. ೧೫

(ಕಿವಿಗೆ ಅವತಂಸವನ್ನು ತೊಟ್ಟು ಲೀಲೆಯಿಂದ ತನ್ನ ಚರಣವನ್ನು ಅಶೋಕ ವೃಕ್ಷದ ಕಡೆಗೆ ಮೃದುವಾಗಿ ನೀಡುವಳು.)

ರಾಜ—ವಯಸ್ಯ, ನೋಡು.

ತನ್ನ ಕಿವಿಯವತಂಸಕಸುಗೆಯ ಕೊನೆಯ ಕೊಂಡುದ
ಕದಕೆ ತಾನಿತ್ತಿಹಳು ತನ್ನಡಿಯ
ನಾನೆ ವಂಚಿತನಾದೆನೆಂದೆಣಿಸುವೆನು ವಿನಿಮಯ
ದಿಂದಲಿಂದಿವರಿರ್ವರೀ ಎಣೆಯು. ೧೬

ಮಾಳವಿಕೆ—ನಮ್ಮಿಬ್ಬರ ಈ ಸಂಭಾವನೆ ಸಫಲವಾದೀತೆ ?

ಬಕುಳಾವಳಿಕೆ—ಸಖಿ, ಇನ್ನು ನಿನ್ನ ದೋಷವೇನೂ ಇರುವುದಿಲ್ಲ. ಇಂತಹ

ಚರಣಸತ್ಕಾರವನ್ನು ಪಡೆದೂ ಕುಸುಮಿಸಲು ತಡಮಾಡಿದರೆ ಅಶೋಕವೇ ನಿರ್ಗುಣವೆನಿಸುವುದು.

ರಾಜ—

ತಾವರೆಯ ಮೆಲ್ಲಡಿಯ ಅಂದುಗೆಯ ಸವಿದನಿಯ
ಅಸಿನಡುವಿನವಳೊದೆಯ ಮನ್ನಣೆಯ ಪಡೆದು
ಅಸುಗೆ ಹೂ ತಳೆಯದೊಡೆ ಬರಿದೆ ನೀನಾಂತವೆಯ
ಕಾಮಿಸಾಧಾರಣವನೀದೋಹದವನು. ೧೭

ಮಿತ್ರ, ಮಾತಿಗೆ ಅವಕಾಶ ದೊರಕಿಸಿಕೊಂಡು ಪ್ರವೇಶಿಸಲಿಚ್ಛಿಸುತ್ತೇನೆ.

ವಿದೂಷಕ—ಬಾ. ಇವಳನ್ನು ಪರಿಹಾಸ್ಯ ಮಾಡುತ್ತೇನೆ.

(ಇಬ್ಬರೂ ಪ್ರವೇಶಿಸುವರು.)

ನಿಪುಣಿಕೆ—ಒಡತಿ, ಮಹಾರಾಜನು ಪ್ರವೇಶಿಸುತ್ತಿರುವನು.

ಇರಾವತಿ—ಹೀಗಾಗುವುದೆಂದು ನಾನು ಮೊದಲೇ ಯೋಚಿಸಿದ್ದೆ.

ವಿದೂಷಕ—(ಹತ್ತಿರ ಬಂದು) ಪೂಜ್ಯಳೆ, ಮಹಾರಾಜನ ಪ್ರಿಯವಯಸ್ಯನಾದ ಈ ಅಶೋಕವನ್ನು ಎಡಗಾಲಿನಿಂದ ಒದೆಯಬಹುದೆ ನೀನು?

ಇಬ್ಬರೂ—(ಸಂಭ್ರಮಗೊಂಡು) ಓಹೋ! ಮಹಾರಾಜನು!

ವಿದೂಷಕ—ಬಕುಳಾವಳಿಕೆ, ಈ ನಿನ್ನ ಸಖಿ ಇಂತಹ ಅವಿನಯವನ್ನು ಮಾಡುತ್ತಿರುವಾಗ ತಿಳಿದವಳು ನೀನು ಬಳಿಯಿದ್ದೂ ಏಕೆ ನಿವಾರಿಸದೆ ಹೋದೆ? (ಮಾಳವಿಕೆ ಭಯವನ್ನು ನಟಿಸುವಳು.)

ನಿಪುಣಿಕೆ—ಒಡತಿ, ನೋಡು. ಆರ್ಯ ಗೌತಮನು ಏನು ಮಾಡಲಿರುವನೆಂದು.

ಇರಾವತಿ—ಹೀಗಲ್ಲದಿದ್ದರೆ ಈ ಬ್ರಹ್ಮಬಂಧುವಿಗೆ ಇನ್ನು ಹೇಗೆ ಜೀವನ?

ಬಕುಳಾವಳಿಕೆ—ಆರ್ಯ, ಈಕೆ ದೇವಿಯ ನಿಯೋಗವನ್ನು ನೆರವೇರಿಸುತ್ತಿರುವಳು. ಈ ಅತಿಕ್ರಮಾಚರಣೆಯಲ್ಲಿ ಈಕೆ ಪರತಂತ್ರಳು. ಮಹಾರಾಜನು ಪ್ರಸನ್ನನಾಗಬೇಕು.

(ತಾನೂ ನಮಸ್ಕರಿಸಿ ಮಾಳವಿಕೆಯೂ ನಮಸ್ಕರಿಸುವಂತೆ ಮಾಡುವಳು.)

ರಾಜ— ಹಾಗಿದ್ದರೆ ನೀನು ನಿರಪರಾಧಿನಿ. ಎದ್ದೇಳು ಭದ್ರೆ. (ಕೈ ಹಿಡಿದು ಎಬ್ಬಿಸುವನು.)

ವಿದೂಷಕ—ಸರಿ ಸರಿ. ಮಹಾರಾಣಿಯನ್ನು ಗೌರವಿಸಬೇಕಾದದ್ದೇ.

ರಾಜ—(ನಕ್ಕು)

ವಾಮಚರಣವಿದೋ ವಿಲಾಸಿನಿ ನೋಯದಿರ್ದಪುದೆಂತು ವಾಮೋರು
ಮರದ ಬೆಟ್ಟತ್ತೆಡೆಯೊಳೆರಗಿಸೆ ತಳಿರ ತೆರನಿರುವಡಿಯನೆಲೆ ಭೀರು. ೧೮

(ಮಾಳವಿಕೆ ಲಜ್ಜೆಯನ್ನು ನಟಿಸುವಳು.)

ಇರಾವತಿ—(ಅಸೂಯೆಯಿಂದ) ಆಹಾ! ಆರ್ಯಪುತ್ರನು ಎಂತಹ ನವನೀತ ಹೃದಯನು!

ಮಾಳವಿಕೆ—ಬಕುಳಾವಳಿಕೆ, ಬಾ. ನಿಯೋಗವನ್ನು ನಡಸಿಯಾಯಿತೆಂದು ಬಿನ್ನವಿಸಿಕೊಳ್ಳೋಣ.

ಬಕುಳಾವಳಿಕೆ—ಹಾಗಾದರೆ 'ನನ್ನನ್ನು ಬಿಟ್ಟುಕೊಡಿ' ಎಂದು ಒಡೆಯ ನನ್ನು ಕೇಳಿಕೊ.

ರಾಜ—ಭದ್ರೆ, ಹೋಗುವೆಯಂತೆ. ಕಾಲೋಚಿತವಾದ ನನ್ನ ಬೇಡಿಕೆಗಳನ್ನು ಸ್ವಲ್ಪ ಕೇಳು.

ಬಕುಳಾವಳಿಕೆ—ಮನಸ್ಸಿಟ್ಟು ಕೇಳು. ಒಡೆಯನು ಅಪ್ಪಣೆಮಾಡಬೇಕು.

ರಾಜ—

ಧೃತಿಯು ಕುಸುಮವ ಹಲವು ದಿನದಿಂದಾನುಮಾನದೆ
ನಮದು ಪೋಲ್ತಿಹೆನಸುಗೆಯ
ಪೆರತನೇನುಮನೆಣ್ಣದಿರುವೀ ನನ್ನ ಬಯಕೆಯ
ಸೋಂಕು ಸೊಡೆಯಿಂ ತಣಿಪೆಯು. ೧೯

ಇರಾವತಿ—(ಥಕ್ಕನೆ ಎದುರಿಗೆ ಬಂದು) ಸಲ್ಲಿಸು, ಸಲ್ಲಿಸು. ಅಶೋಕ ಕುಸುಮಿಸುವುದೋ ಇಲ್ಲವೋ, ಈತನೇನೋ ಹೂವು ಬಿಡುವನು. ಹಣ್ಣನ್ನೂ . . . .

(ಇರಾವತಿಯನ್ನು ಕಂಡು ಎಲ್ಲರೂ ಭ್ರಾಂತರಾಗುವರು.)

ರಾಜ—(ಬೇರೆ ಕಡೆ ತಿರುಗಿ) ವಯಸ್ಯ, ಈಗೇನುಪಾಯ?

ವಿದೂಷಕ—ಮತ್ತೇನಿದೆ, ಜಂಘಾಬಲವೇ.

ಇರಾವತಿ—ಬಕುಳಾವಳಿಕೆ, ನೀನು ಕೆಲಸವನ್ನು ಚೆನ್ನಾಗಿ ಆರಂಭಮಾಡಿದೀಯೆ. ಮಾಳವಿಕೆ, ಆರ್ಯಪುತ್ರನ ಪ್ರಾರ್ಥನೆಯನ್ನು ಸಫಲಗೊಳಿಸು.

ಇಬ್ಬರೂ—ಒಡತಿ, ಪ್ರಸನ್ನಳಾಗು. ಒಡೆಯನ ಪ್ರಣಯವನ್ನು ಪರಿಗ್ರಹಿಸಲು ನಾವೆಷ್ಟರವರು ? (ತೆರಳುವರು.)

ಇರಾವತಿ—ಅಯ್ಯೋ ? ಪುರುಷರು ಎಂತಹ ವಿಶ್ವಾಸ ಘಾತುಕರು ? ನಾನಾದರೋ ಬೇಡರ ಹಾಡಿಗೆ ಮಾರುಹೋಗಿ ಬಲೆಗೆ ಬಿದ್ದ ಜಿಂಕೆಯಂತೆ ನನಗಾದ ಮೋಸವನ್ನು ಅರಿಯದೆ ಹೋದೆ.

ವಿದೂಷಕ—(ಪಕ್ಕಕ್ಕೆ ತಿರುಗಿ) ಈಗ ಏನಾದರೂ ಒಂದು ಹಂಚಿಕೆ ಹುಡುಕು. ಕನ್ನ ಹಾಕುತ್ತಿರುವಾಗಲೇ ಸಿಕ್ಕಿಬಿದ್ದ ಕಳ್ಳನು ಕನ್ನ ಹಾಕುವುದನ್ನು ಕಲಿಯುತ್ತಿದ್ದೇನೆ ಎಂದು ಹೇಳುವುದಿಲ್ಲವೆ ?

ರಾಜ—ಸುಂದರಿ, ನನಗೆ ಮಾಳವಿಕೆಯಿಂದ ಆಗಬೇಕಾದುದೇನೂ ಇಲ್ಲ. ನೀನು ಬರುವುದು ಬಹಳ ತಡವಾದುದರಿಂದ ಏನೋ ಒಂದು ವಿಧವಾಗಿ ವಿನೋದದಲ್ಲಿದ್ದೆ ; ಅಷ್ಟೆ.

ಇರಾವತಿ—ಸರಿಸರಿ, ನಂಬತಕ್ಕದ್ದೇ. ಇಂತಹ ವಿನೋದವಸ್ತು ಸಿಕ್ಕಿದೆ ಎಂದು ನನಗೆ ತಿಳಿಯದೆ ಹೋಯಿತು. ತಿಳಿದಿದ್ದಿದ್ದರೆ ಮಂದಭಾಗ್ಯಳಾದ ನಾನು ಈ ರೀತಿ ಮಾಡುತ್ತಿರಲಿಲ್ಲ.

ವಿದೂಷಕ—ಪೂಜ್ಯಳೆ, ಇಷ್ಟುಮಾತ್ರಕ್ಕೇ ನೀನು ಈ ಮಹನೀಯನ ದಾಕ್ಷಿಣ್ಯವನ್ನು ತಿರಸ್ಕರಿಸುವುದು ಉಚಿತವಲ್ಲ. ಮಾರ್ಗಮಧ್ಯದಲ್ಲಿ ಆಕಸ್ಮಿಕವಾಗಿ ದೇವಿಯ ಪರಿಜನರು ಸಂಧಿಸಿದರೆ ಅವರೊಡನೆ ಮಾತುಕಥೆಯಾಡುವುದೂ ಅಪರಾಧವೆನಿಸಿದರೆ ನೀವೇ ಯಾವುದು ಸರಿ ಯಾವುದು ತಪ್ಪು ಎನ್ನುವ ನ್ಯಾಯವನ್ನು ಹೇಳಬೇಕು.

ಇರಾವತಿ—ಓಹೋ, ಹಾಗಾದರೆ ಧಾರಾಳವಾಗಿ ನಡೆಯಲಿ ಸಲ್ಲಾಪ. ನಾನು ತಾನೆ ಏಕೆ ಆಯಾಸಪಡಲಿ ? (ಮುನಿಸಿನಿಂದ ಹೊರಡುವಳು.)

ರಾಜ—(ಬಳಿವಿಡಿದು ನಡೆದು) ಪ್ರಿಯೆ, ಪ್ರಸನ್ನಳಾಗು.

(ಡಾಬು ಕಾಲಿಗೆ ಸಿಕ್ಕಿಕೊಂಡಿದ್ದರೂ ಇರಾವತಿ ಹಾಗೆಯೇ ಮುಂದೆ ನಡೆಯುವಳು.)

ರಾಜ—ಸುಂದರಿ, ಪ್ರಣಯಿಜನದ ವಿಷಯದಲ್ಲಿ ಇಂತಹ ಉಪೇಕ್ಷೆ ಉಚಿತವಲ್ಲ.

ಇರಾವತಿ—ಶಠ, ನೀನು ವಿಶ್ವಾಸಕ್ಕೆ ಯೋಗ್ಯನಲ್ಲ.

ರಾಜ—

ತೋರಿವುದಿರಲಿಂತೋ(ವೊ ಚಂಡಿಯೆ ನಿತ್ಯ
ಪರಿಚಿತನೆನಿಸಿದೆನ್ನನು ಶಠನು ನೀನೆಂದು
ಚರಣಕೆರಗುತೆ ನೋಡು ಮೇಖಲೆ ಬೇಡು
ತ್ತಿದ್ದರು ಕೋಪವನು ಬಿಡದಿರುವೆ ನೀನಿಂದು. ೨೦

ಇರಾವತಿ—ಹಾಳಾದ ಈ ಪಟ್ಟಿ ಕೂಡ ನಿನ್ನನ್ನೇ ಅನುಸರಿಸುತ್ತಿದೆ.

(ನಡುಪಟ್ಟಿಯನ್ನು ತೆಗೆದುಕೊಂಡು ರಾಜನನ್ನು ಹೊಡೆಯ ಹೋಗುವಳು.)

ರಾಜ—ವಯಸ್ಯ, ಈ ಇರಾವತಿ—

ಜಘನದೇಶದಿನೆಂತೊ ಜಗುಳಿದೊಡ್ಯಾಣವನು ತಾಂ ಕೈಯೊಳಾಂತು
ಬಿಂಜವನು ಬಡಿದಪುದು ಮಿಂಚುಕಶೆಯಿಂದೆ ಮಳೆಗರೆವ ಮುಗಿಲಿಂತು
ಕಂಬನಿಯ ಮಿಡಿದಿವಳು ಸಡೆಯುವಳು ಭರದಿಂದಲೆನ್ನನಿಂದಂತು. ೨೧

ಇರಾವತಿ—ಏನೇನು? ಮತ್ತೆ ನನ್ನನ್ನೇ ಅಪರಾಧಿನಿಯನ್ನಾಗಿಸುವೆಯಾ?

(ನಡುಪಟ್ಟಿಯನ್ನು ಕೈಗೆ ಎತ್ತಿಕೊಳ್ಳುವಳು)

ರಾಜ—

ನೀಂ ವಿಲಾಸಮನಿಂತು ವರ್ಧಿಸುತಿನ್ನುಮಾಂತಿಹು
ದೇಕೆ ದಾಸನೊಳುಂತೆ ಕೋಪವನು
ಕುಟಿಲಕೇಶಿಯೆ, ಇಳುಹಲೇತಕೆ ತಪ್ಪು ಮಾಡಿರು
ವೆನ್ನೊಳೆತ್ತಿದ ದಂಡವನ್ನಿದನು. ೨೨

(ತನಗೆ ತಾನೆ) ದಿಟವಾಗಿಯೂ ಈಗ ನಾನು ಅನುಗ್ರಹವನ್ನು ಪಡೆಯದೆ ಇರುವುದಿಲ್ಲ. (ಕಾಲುಗಳ ಮೇಲೆ ಬೀಳುವನು)

ಇರಾವತಿ—ಇವು ಮಾಳವಿಕೆಯ ಚರಣಗಳಲ್ಲ; ಅವಾದರೆ ನಿನಗೆ ಸ್ಪರ್ಶ ದೋಹದವನ್ನು ಪೂರೈಸಿಯಾವು. (ಚೇಟಿಯೊಡನೆ ತೆರಳುವಳು)

ವಿದೂಷಕ—ಏಳು, ಅನುಗ್ರಹೀತನಾದೆ.

ರಾಜ—(ಎದ್ದು ಇರಾವತಿಯನ್ನು ಕಾಣದೆ) ಏನು? ಇರಾವತಿ ಹೊರಟು ಹೋದಳೆ?

ವಿದೂಷಕ—ವಯಸ್ಯ, ದೇವರ ದಯೆ. ನಿನ್ನ ಅವಿನಯಕ್ಕೆ ಆಕೆ ನಿನ್ನನ್ನು ಇಷ್ಟರಲ್ಲಿಯೆ ಬಿಟ್ಟು ಹೋಗಿದ್ದರೂ ಆಕೆಯ ಕೋಪವಿನ್ನೂ ಇಳಿದಿಲ್ಲ. ಅಂಗಾರಕ ಗ್ರಹದಂತೆ ಆಕೆ ಮತ್ತೆ ಬಂದುಬಿಟ್ಟಾಳು. ಅದಕ್ಕೆ ಮೊದಲೆ ನಾವು ಬೇಗ ಹೊರಟುಹೋಗೋಣ ನಡೆ, ನಡೆ.

ರಾಜ—ಆಹಾ, ಮನಸಿಜನ ವೈಷಮ್ಯವೇ!

ಪ್ರೇಯಸಿಯೊಳೆನ್ನ ಮನ ನೆಟ್ಟುದರಿನೆಣಿಸುವೆನು
ಪ್ರಣಿಪಾತಲಂಘನವೆ ಸೇವೆಯೆಂದು
ಪ್ರಣಯವತಿಯಾದರೂ ಕುಪಿತೆಯಾದಾಕೆಯನು
ನನಗಿಂದುಪೇಕ್ಷಿಪುದು ಶಕ್ಯವಹುದು. ೨೩

(ರಾಜನೂ ವಿದೂಷಕನೂ ತೆರಳುವರು.)

## ಮೂರನೆಯ ಅಂಕ ಮುಗಿದುದು

---

# ನಾಲ್ಕನೆಯ ಅಂಕ

(ಬಳಿಕ ಪರ್ಯುತ್ಸುಕನಾದ ರಾಜನೂ ಅವನ ಹಿಂದೆ ಪ್ರತೀಹಾರಿಯೂ ಪ್ರವೇಶಿಸುವರು.)

ರಾಜ—(ತನಗೆ ತಾನೆ)

ಶ್ರುತಿಯ ಪಥವಿಡಿದೆನ್ನ ಬಳಿ ಬಂದವಳೊಳಾಸ್ಥೆಯು ತಳೆಯೆ ಬೇರ್ಗಳನಾನುತೆ
ನನ್ನ ಕಂಗಳ ನೋಟದೆಡೆಯೊಳು ಸುಳಿಯೆ ಒಲವರದಂಕುರಂಗಳನಾನುತೆ
ಕೈಯ ಸೋಂಕಿನೊಳೆನ್ನ ಮೈಯೊಳಗೊಗೆಯೆ ಪುಲಕಗಳಲರತೊಂಗಲನಾನುತೆ
ಬೆಳೆದ ಮನ್ಮಥವೃಕ್ಷ ತೋರದೆ ಹಣ್ಣ ಸವಿಯನು ಆರ್ತನೆನ್ನನು ರಮಿಸುತೆ.

(ಗಟ್ಟಿಯಾಗಿ) ಮಿತ್ರ, ಗೌತಮ!

ಪ್ರತೀಹಾರಿ—ಜಯವಾಗಲಿ ಮಹಾರಾಜನಿಗೆ. ಗೌತಮನು ಬಳಿಯಲ್ಲಿಲ್ಲ.

ರಾಜ—(ತನಗೆ ತಾನೆ) ಆ! ಹೌದು, ಮಾಳವಿಕೆಯ ವೃತ್ತಾಂತವನ್ನು ತಿಳಿದು ಬಾರೆಂದು ನಾನೆ ಕಳುಹಿಸಿದೆನು.

ವಿದೂಷಕ—(ಪ್ರವೇಶಿಸಿ) ನಿನಗೆ ಜಯವಾಗಲಿ.

ರಾಜ—ಜಯಸೇನೆ, ಧಾರಿಣೀದೇವಿ ಎಲ್ಲಿದಾಳೆ? ಕಾಲುನೋವು ಮರೆಯಲು ಏನು ಮಾಡುತ್ತಿದಾಳೆ? ತಿಳಿದು ಬಾ.

ಪ್ರತೀಹಾರಿ—ಅಪ್ಪಣೆ. (ತೆರಳುವಳು.)

ರಾಜ—ಗೌತಮ, ನಿನ್ನ ಆ ಗೆಳತಿಯ ಸಮಾಚಾರವೇನು?

ವಿದೂಷಕ—ಬೆಕ್ಕಿನ ಹಿಡಿತಕ್ಕೆ ಸಿಕ್ಕಿದ ಕೋಗಿಲೆಯ ಸಮಾಚಾರವೇ.

ರಾಜ—(ವಿಷಾದದಿಂದ) ಹಾಗೆಂದರೆ?

ವಿದೂಷಕ—ಪಾಪ, ಅವಳನ್ನು ನೆಲಮಾಳಿಗೆಯಲ್ಲಿ ಆ ಪಿಂಗಳಾಕ್ಷಿ ಮೃತ್ಯುಮುಖದಲ್ಲಿ ಹೇಗೋ ಹಾಗೆ ಸೆರೆ ಹಾಕಿದಾಳೆ.

ರಾಜ—ನನ್ನ ಸಂಪರ್ಕವನ್ನು ತಿಳಿದಿದ್ದರಿಂದಲ್ಲವೆ?

ವಿದೂಷಕ—ಮತ್ತೇನು?

ರಾಜ—ಗೌತಮ, ದೇವಿಯನ್ನು ಚಂಡಿಯನ್ನಾಗಿಸಿ ಹೀಗೆ ನಮಗೆ ವಿಮುಖರಾಗಿರುವವರು ಯಾರು?

ವಿದೂಷಕ—ಪರಿವ್ರಾಜಿಕೆ ನನಗೆ ಹೇಳಿದ್ದನ್ನು ಕೇಳು: ಮಹಾರಾಣಿಯ ಕಾಲು ನೋವು ಹೇಗಿದೆ ಎಂದು ಕೇಳಲು ನಿನ್ನೆ ಇರಾವತಿ ಬಂದಳಂತೆ.

ರಾಜ—ಆಮೇಲೇನಾಯಿತು ?

ವಿದೂಷಕ—ಆಗ ದೇವಿ ಅವಳನ್ನು 'ವಲ್ಲಭನನ್ನು ನೋಡಿದ್ದೆಯಾ' ಎಂದು ಕೇಳಿದಳಂತೆ. ಅದಕ್ಕೆ ಅವಳು 'ಈ ಉಪಚಾರದ ಮಾತು ಏಕೆ? ವಲ್ಲಭತ್ವವೆಲ್ಲ ಪರಿಜನರ ಪಾಲಾಗಿರುವುದನ್ನು ತಿಳಿದು ತಿಳಿದೂ ಕೇಳುತ್ತಿದೀಯಲ್ಲಾ' ಎಂದಳಂತೆ.

ರಾಜ—ಮಾಳವಿಕೆಯ ವರ್ತನೆ ಅಷ್ಟು ಅಸ್ಪಷ್ಟವಾಗಿದ್ದರೂ ಈ ತೆರನಾದ ಮಾತಿನಿಂದ ದೇವಿ ಅವಳ ವಿಷಯದಲ್ಲಿ ಶಂಕೆಗೊಂಡಿರಬೇಕು. ಆಮೇಲೆ, ಆಮೇಲೆ ?

ವಿದೂಷಕ—ಆಮೇಲೇನು ? ಮಹಾರಾಣಿ ಕೇಳಿದ ಹಾಗೆಲ್ಲ ಇರಾವತಿ ನಿನ್ನ ಅವಿನಯವನ್ನೆಲ್ಲ ಸ್ಪಷ್ಟವಾಗಿ ಶ್ರುತಪಡಿಸಿದಳು.

ರಾಜ—ಆಹಾ! ಅವಳಿಗೆ ಎಷ್ಟು ದೀರ್ಘರೋಷ? ಆಮೇಲಾಮೇಲೆ?

ವಿದೂಷಕ—ಏನು ಆಮೇಲೆ! ಮಾಳವಿಕೆ ಬಕುಳಾವಳಿಕೆಯರಿಗೆ ಸಂಕೋಲೆ ತೊಡಿಸಿದ್ದಾರೆ. ಅವರಿಬ್ಬರೂ ನಾಗಕನ್ನಿಕೆಯರಂತೆ ಸೂರ್ಯಕಿರಣ ವನ್ನೇ ಕಾಣದಂತಹ ಪಾತಾಳವಾಸದ ಸವಿಯನ್ನು ಅನುಭವಿಸು ತ್ತಿದ್ದಾರೆ.

ರಾಜ—ಕಷ್ಟ, ಕಷ್ಟ !

> ನುಣ್ಣಿತಹ ದನಿಗೈವ ಕೋಗಿಲೆ ದುಂಬಿಯೊಡನೊಲಿ
> ದ್ದೈದೆ ಮಾಮರದೊಂದು ಚೆಂಗೊನೆಯ
> ಗಾಳಿ ಭರದೊಳು ಬೀಸುತೊದವಲಕಾಲವೃಷ್ಟಿಯಿ
> ನಾಹ ಪುಗುವವೊಲಾಯ್ತು ಪೊಟ್ಟರೆಯ. ೨

ವಯಸ್ಯ, ಈ ವಿಷಯದಲ್ಲಿ ಯಾವ ಉಪಾಯಕ್ಕಾದರೂ ಅವಕಾಶ ವಿದೆಯೆ ?

ವಿದೂಷಕ—ಅದು ಹೇಗಿದ್ದೀತು ? "ನನ್ನ ಮುದ್ರೆಯುಂಗುರವನ್ನು ತಂದು ತೋರಿಸಿದ ಹೊರತು ಹತಾಶೆಯರಾದ ಈ ಮಾಳವಿಕೆ ಬಕುಳಾವಳಿಕೆ ಯರನ್ನು ನೀನು ಬಿಡಕೂಡದು" ಎಂದು ಪಾತಾಳಗೃಹದಲ್ಲಿ ಕಾವ

ಲಿರುವ ಮಾಧವಿಕೆಗೆ ದೇವಿ ಕಟ್ಟಪ್ಪಣೆ ಮಾಡಿದಾಳೆ.

ರಾಜ—(ನಿಟ್ಟುಸಿರು ಬಿಟ್ಟು ಪರ್ಯಾಲೋಚಿಸಿ) ಮಿತ್ರ, ಈಗ ಇದಕ್ಕೆ ಹೇಗೆ ಮಾಡೋಣ?

ವಿದೂಷಕ—(ಚಿಂತಿಸಿ) ಇದೆ, ಒಂದು ಉಪಾಯ.

ರಾಜ—ಏನು?

ವಿದೂಷಕ—(ಸುತ್ತ ನೋಡಿ) ಯಾರಾದರೂ ಕೇಳಿಸಿಕೊಂಡುಬಿಟ್ಟಾರು. ಕಿವಿಯಲ್ಲಿ ಹೇಳುತ್ತೇನೆ. (ರಾಜನ ಹತ್ತಿರ ಬಂದು ಕಿವಿಯಲ್ಲಿ ಉಸುರುವನು) ಹೀಗೆ.

ರಾಜ—(ಹರ್ಷದಿಂದ) ಸಾಧು, ಸಾಧು! ಕಾರ್ಯಸಿದ್ಧಿಗಾಗಿ ಪ್ರಯೋಗಿಸು.

ಪ್ರತೀಹಾರಿ—(ಪ್ರವೇಶಿಸಿ) ದೇವ, ದೇವಿಯರು ಪ್ರವಾತಶಯನದಲ್ಲಿ ರಕ್ತ ಚಂದನವನ್ನು ತೊಡೆದಿರುವ ಚರಣವನ್ನು ಪರಿಜನದ ತೊಡೆಯ ಮೇಲಿಟ್ಟು ಪೂಜ್ಯ ಪರಿವ್ರಾಜಿಕೆ ಹೇಳುತ್ತಿರುವ ಕಥೆಗಳನ್ನು ಕೇಳುತ್ತ ವಿನೋದದಿಂದಿರುವರು.

ರಾಜ—ನನ್ನ ಪ್ರವೇಶಕ್ಕೆ ಇದೇ ತಕ್ಕ ಸಮಯ.

ವಿದೂಷಕ—ಮಿತ್ರ, ನೀನು ಹೊರಡು. ನಾನು ದೇವಿಯನ್ನು ಕಾಣುವುದಕ್ಕಾಗಿ ಏನನ್ನಾದರೂ ತೆಗೆದುಕೊಂಡು ಬರುತ್ತೇನೆ.

ರಾಜ—ಈ ನಮ್ಮ ರಹಸ್ಯವನ್ನು ಜಯಸೇನೆಗೂ ತಿಳಿಸಿಹೋಗು.

ವಿದೂಷಕ—ಆಗಲಿ (ಜಯಸೇನೆಯ ಕಿವಿಯಲ್ಲಿ) ಹೀಗೆ. (ತೆರಳುವನು.)

ರಾಜ—ಜಯಸೇನೆ, ದೇವಿ ಮಲಗಿರುವ ಪ್ರವಾತಶಯನಮಂದಿರಕ್ಕೆ ದಾರಿ ತೋರಿಸು.

ಪ್ರತೀಹಾರಿ—ಮಹಾರಾಜ ಹೀಗೆ, ಹೀಗೆ ದಯಮಾಡಬೇಕು.

(ಬಳಿಕ ಶಯನಸ್ಥಳಾದ ದೇವಿಯೂ ಪರಿವ್ರಾಜಿಕೆಯೂ ವಿಭವಕ್ಕೆ ತಕ್ಕ ಪರಿವಾರದವರೂ ಪ್ರವೇಶಿಸುವರು)

ದೇವಿ—ಭಗವತಿ, ಕಥಾವಸ್ತು ಅತಿರಮಣೀಯವಾಗಿದೆ. ಆಮೇಲಾಮೇಲೆ?

ಪರಿವ್ರಾಜಿಕೆ—(ತಿರುಗಿ ನೋಡಿ) ಮುಂದಿನ ಕಥೆಯನ್ನು ಆಮೇಲೆ ಹೇಳುವೆನು; ನಿನ್ನ ಪ್ರಾಣೇಶ್ವರನು ಬಿಜಮಾಡಿದನು.

ದೇವಿ—ಏನು? ಆರ್ಯಪುತ್ರನೆ? (ಏಳಹೋಗುವಳು)

ರಾಜ— ಬೇಡ ಬೇಡ, ಉಪಚಾರಕ್ಕಾಗಿ ಆಯಾಸಪಡುವುದು ಬೇಡ.

ನೋವುಂಡು ಮಸುನಿಮಣೆಯಾಸರೆಯೊಳಿರುವ ಚರಣವನು
ಅಂದುಗೆಯ ವಿರಹವನು ಹಿಂದೆಂದುಮರಿಯದಿರುವಿದನು
ತಗದು ಮೇಣೆನ್ನುಮನು ಪೀಡಿಪುದು ಕಲವಾಣಿ ನೀನು. ೩

ದೇವಿ— ಜಯವಾಗಲಿ, ಆರ್ಯಪುತ್ರನಿಗೆ.

ಪರಿವ್ರಾಜಿಕೆ—ಮಹಾರಾಜನಿಗೆ ಜಯವಾಗಲಿ.

ರಾಜ—(ಪರಿವ್ರಾಜಿಕೆಗೆ ಮಣಿದು ಕುಳಿತು) ದೇವಿ, ನಿನ್ನ ಕಾಲುನೋವು ಸಹ್ಯವಾಗಿದೆಯೇ?

ದೇವಿ— ಈಗ ಎಷ್ಟೋ ಮೇಲು.

(ಬಳಿಕ ಹೆಬ್ಬೆರಳಿಗೆ ಜನಿವಾರ ಸುತ್ತಿಕೊಂಡು ವಿದೂಷಕನು ಸಂಭ್ರಾಂತನಾಗಿ ಪ್ರವೇಶಿಸುವನು.)

ವಿದೂಷಕ—ಕಾಪಾಡಬೇಕು, ಕಾಪಾಡಬೇಕು. ಸರ್ಪರೂಪಿಯಾದ ಮೃತ್ಯು ನನ್ನನ್ನು ಕಡಿಯಿತು. (ಎಲ್ಲರೂ ವಿಷಾದಪಡುವರು.)

ರಾಜ— ಕಷ್ಟ, ಕಷ್ಟ, ಎಲ್ಲಿ ಅಲೆಯುತ್ತಿದ್ದೆ?

ವಿದೂಷಕ—ದೇವಿಯನ್ನು ಸಂದರ್ಶಿಸಲು ಆಚಾರಪುಷ್ಪಗಳನ್ನು ತರಲೆಂದು ಪ್ರಮದವನಕ್ಕೆ ಹೋದೆ.

ದೇವಿ—ಛೆ, ಛೆ, ಈ ಬ್ರಾಹ್ಮಣನ ಪ್ರಾಣಸಂಶಯಕ್ಕೆ ನಾನೇ ಕಾರಣಳಾದೆನೇ!

ವಿದೂಷಕ—ಆ ಮೇಲೆ ಅಲ್ಲಿ ಅಶೋಕದ ಹೂಗೊಂಚಲಿಗೆ ಬಲಗೈ ಚಾಚಿದೆ. ಕೂಡಲೆ ಪೊಟ್ಟರೆಯಿಂದ ಹೊರನುಗ್ಗಿ ಬಂದ ಸರ್ಪರೂಪಿಯಾದ ಕಾಲನು ನನ್ನನ್ನು ಕಡಿದನು. ಇದೋ ಹಲ್ಲುಗಳ ಗುರುತು.

ಪರಿವ್ರಾಜಿಕೆ—ಹಾಗಾದರೆ ಕಡಿದ ಸ್ಥಳವನ್ನು ಕೊಯ್ದು ಹಾಕುವುದು ಪ್ರಥಮಚಿಕಿತ್ಸೆ ಎಂದು ಹೇಳುತ್ತಾರೆ. ಮೊದಲು ಅದನ್ನು ಮಾಡಿಸಿ.

ಕಡಿದ ಎಡೆಯನು ಕತ್ತರಿಸುವುದು ಸುಡುವುದಥವಾ ವ್ರಣದೆ ನೆತ್ತರನೆಳೆವುದು
ಕಡಿದ ಜೀವರನುಳುಹುವಂದಿಂತಿವುಗಳೆಲ್ಲವು ಸಲೆ ಚಿಕಿತ್ಸೆಗಳೆನಿಪುವು. ೪

ರಾಜ—ಈಗ ಇದು ವಿಷವೈದ್ಯನ ಕರ್ತವ್ಯವಾಗಿದೆ. ಜಯಸೇನೆ, ಬೇಗ ಧ್ರುವಸಿದ್ಧಿಯನ್ನು ಕರೆದುಕೊಂಡು ಬಾ.

ಪ್ರತೀಹಾರಿ—ಅಪ್ಪಣೆ. (ತೆರಳುವಳು.)

ವಿದೂಷಕ—ಅಯ್ಯಯ್ಯೋ, ಪಾಪಿ ಮೃತ್ಯು ನನ್ನನ್ನೂ ಹಿಡಿಯಿತೇ.

ರಾಜ—ಕಾತರಗೊಳ್ಳಬೇಡ, ಒಮ್ಮೊಮ್ಮೆ ಕಡಿದರೆ ವಿಷವೇರದಿರುವುದೂ ಉಂಟು.

ವಿದೂಷಕ—ಹೇಗೆ ಹೆದರದೆ ಇರಲಿ? ನನ್ನ ಮೈಯೆಲ್ಲ ಸಿಮುಸಿಮುಗುಟ್ಟುತ್ತಿದೆ.

ದೇವಿ—ಅಯ್ಯೋ, ಈ ವಿಕಾರ ಅಶುಭವನ್ನು ಸೂಚಿಸುತ್ತಿದೆ. ಇವನನ್ನು ಹಿಡಿದುಕೊಳ್ಳಿ.

(ಪರಿಜನರು ಸಂಭ್ರಮದಿಂದ ಹಿಡಿದುಕೊಳ್ಳುವರು.)

ವಿದೂಷಕ—(ರಾಜನನ್ನು ನೋಡಿ) ಅಯ್ಯಾ, ಹುಡುಗತನದಿಂದಲೂ ನಾನು ನಿನಗೆ ಸ್ನೇಹಿತನಾಗಿದ್ದೇನೆ. ಇದನ್ನು ನೆನೆದು ಮುದುಕಿಯಾದ ನನ್ನ ತಾಯಿಯ ಯೋಗಕ್ಷೇಮವನ್ನು ನೀನೇ ವಹಿಸಬೇಕು.

ರಾಜ—ಹೆದರಬೇಡ. ವಿಷವೈದ್ಯನು ಬೇಗ ನಿನಗೆ ಚಿಕಿತ್ಸೆಮಾಡುವನು. ಚಿಂತಿಸಬೇಡ.

ಜಯಸೇನೆ—(ಪ್ರವೇಶಿಸಿ) ದೇವ, ಗೌತಮನನ್ನು ಇಲ್ಲಿಗೇ ತನ್ನಿ ಎಂದು ಧ್ರುವಸಿದ್ಧಿ ಬಿನ್ನವಿಸಿಕೊಳ್ಳುತ್ತಾನೆ.

ರಾಜ—ಸರಿ. ಹಾಗಾದರೆ ಅಂತಃಪುರದ ವರ್ಷವರರು ಈತನನ್ನು ಧ್ರುವಸಿದ್ಧಿಯ ಬಳಿಗೆ ಕರೆದುಕೊಂಡು ಹೋಗಿ ಬಿಡಲಿ.

ಜಯಸೇನೆ—ಅಪ್ಪಣೆ.

ವಿದೂಷಕ—(ದೇವಿಯನ್ನು ನೋಡುತ್ತ) ದೇವಿ! ಬದುಕುವೆನೊ ಇಲ್ಲವೊ, ಮಹಾರಾಜನ ಸೇವೆ ಮಾಡುತ್ತ ನಿನ್ನ ವಿಷಯದಲ್ಲಿ ನಾನೇನಾದರೂ ಅಪಚಾರವೆಸಗಿದ್ದರೆ ಅವೆಲ್ಲವನ್ನೂ ಮನ್ನಿಸಿಬಿಡು.

ದೇವಿ—ದೀರ್ಘಾಯುವಾಗು.

(ವಿದೂಷಕನೂ ಪ್ರತೀಹಾರಿಯೂ ತೆರಳುವರು.)

ರಾಜ—ಅಯ್ಯೊ ಪಾಪ, ಸಹಜವಾಗಿಯೇ ಈತ ಭೀರು. ಯಥಾರ್ಥನಾಮನಾದ ಧ್ರುವಸಿದ್ಧಿ ಈತನನ್ನು ಉಳಿಸುವನೆಂದು ನಂಬಿದೇನೆ.

ಜಯಸೇನೆ—(ಮರಳಿ ಬಂದು) ಜಯವಾಗಲಿ, ಮಹಾರಾಜನಿಗೆ. ಉದ

ಕುಂಭ ವಿಧಾನಕ್ಕೆ ಸರ್ಪಮುದ್ರೆಯಿರುವ ಏನನ್ನಾದರೂ ಹುಡುಕಿ ತನ್ನಿರೆಂದು ಧ್ರುವಸಿದ್ಧಿ ವಿಜ್ಞಾಪಿಸುತ್ತಾನೆ.

ದೇವಿ—ಇದೋ ಸರ್ಪಮುದ್ರೆಯ ಉಂಗುರ. ಆ ಮೇಲೆ ಇದನ್ನು ನನ್ನ ಕೈಗೇ ತಂದುಕೊಡು. (ಉಂಗುರ ತೆಗೆದುಕೊಡುವಳು. ಜಯಸೇನೆ ತೆಗೆದು ಕೊಳ್ಳುವಳು.)

ರಾಜ—ಜಯಸೇನೆ, ಕಾರ್ಯ ನೆರವೇರಿದೊಡನೆಯೇ ನಮಗೆ ಬಂದು ಹೇಳು.

ಜಯಸೇನೆ—ಅಪ್ಪಣೆ. (ತೆರಳುವಳು)

ಪರಿವ್ರಾಜಿಕೆ—ದೇವ, ಗೌತಮನು ನಿರ್ವಿಷನಾದನೆಂದೇ ನನಗೆ ತೋರುತ್ತದೆ.

ರಾಜ—ಹಾಗೆಯೇ ಆಗಲೆಂದು ಆಶಿಸುತ್ತೇನೆ.

ಜಯಸೇನೆ—(ಬಂದು) ಮಹಾರಾಜ, ವಿಷವೇಗವಿಳಿದು ಆರ್ಯ ಗೌತಮನು ಸ್ವಲ್ಪ ಹೊತ್ತಿನಲ್ಲಿಯೇ ಸ್ವಸ್ಥನಾದನು.

ದೇವಿ—ನನ್ನ ಪುಣ್ಯ ; ಅಪವಾದ ತಪ್ಪಿತು.

ಜಯಸೇನೆ—ಅಲ್ಲದೆ ಅಮಾತ್ಯ ವಾಹತಕನು 'ಯೋಚಿಸತಕ್ಕ ರಾಜ ಕಾರ್ಯ ಬಹಳವಿದೆ. ಪ್ರಭುಗಳು ದರ್ಶನವನ್ನು ದಯಪಾಲಿಸಬೇಕು' ಎಂದು ವಿಜ್ಞಾಪಿಸುತ್ತಿರುವನು.

ದೇವಿ—ಆರ್ಯಪುತ್ರ, ಕಾರ್ಯಸಿದ್ಧಿಯಾಗಲಿ, ಹೋಗಿ ಬಾ.

ರಾಜ—(ಎದ್ದು) ದೇವಿ, ಇಲ್ಲಿ ಬಿಸಿಲು ಬಹಳ. ಇದಕ್ಕೆ ಶೀತಕ್ರಿಯೆ ಲೇಸು. ಸೆಜ್ಜೆಯನ್ನು ಬೇರೊಂದೆಡೆಗೆ ಒಯ್ಯಬೇಕು.

ದೇವಿ—ಬಾಲಕಿಯರೆ, ಆರ್ಯಪುತ್ರನು ಹೇಳಿದಂತೆ ಮಾಡಿ.

ಪರಿಜನ—ಅಪ್ಪಣೆ.

(ದೇವಿಯೂ, ಪರಿವ್ರಾಜಿಕೆಯೂ ಪರಿಜನರೂ ತೆರಳುವರು.)

ರಾಜ—ಜಯಸೇನೆ, ಗುಪ್ತಮಾರ್ಗದಿಂದ ನನ್ನನ್ನು ಪ್ರಮದವನಕ್ಕೆ ಕರೆದು ಕೊಂಡು ಹೋಗು.

ಜಯಸೇನೆ—ಮಹಾರಾಜನು ಹೀಗೆ, ಹೀಗೆ ದಯಮಾಡಿಸಬೇಕು.

ರಾಜ—(ಮುಂದೆ ನಡೆದು) ಜಯಸೇನೆ, ಗೌತಮ ಕಾರ್ಯವನ್ನು ಮುಗಿಸಿದಾನೆ ತಾನೆ ?

ಜಯಸೇನೆ—ಹೌದು.

ರಾಜ—

ಇಷ್ಟಸಂಪ್ರಾಪ್ತಿಗತ್ಯುತ್ತಮೋಪಾಯವೆಂದರಿತಿರುವೆನಿದನು
ಆದರೂ ಕಾತರಿಪುದಳುಕುಬಗೆ ಕುರಿಯುವಂದಿದರ ಸಿದ್ಧಿಯನು. ೫

ವಿದೂಷಕ—(ಪ್ರವೇಶಿಸಿ) ವಯಸ್ಯ, ವರ್ಧಿಸು. ನಮ್ಮ ಮಂಗಳ ಕಾರ್ಯಗಳೆಲ್ಲವೂ ಸಿದ್ಧಿಸಿದುವು.

ರಾಜ—ಜಯಸೇನೆ, ನಿನ್ನ ಕೆಲಸಕ್ಕೆ ನೀನು ಹೋಗು.

ಜಯಸೇನೆ—ಮಹಾರಾಜನ ಅಪ್ಪಣೆಯಂತೆ. (ತೆರಳುವಳು.)

ರಾಜ—ವಯಸ್ಯ, ಆ ಮಾಧವಿಕೆ ಶುದ್ಧ ಕ್ಷುದ್ರೆ. ನಿನ್ನನ್ನೇನೂ ವಿಚಾರಿಸಲೇ ಇಲ್ಲವೆ?

ವಿದೂಷಕ—ದೇವಿಯ ಮುದ್ರೆಯ ಉಂಗುರವನ್ನು ನೋಡಿದ ಮೇಲೆ ಏನು ತಾನೆ ವಿಚಾರಿಸುತ್ತಾಳೆ?

ರಾಜ—ಮುದ್ರೆಯುಂಗುರವನ್ನು ನಾನು ಕೇಳುತ್ತಿಲ್ಲ. 'ಸೆರೆಯಲ್ಲಿರುವ ಈ ಇಬ್ಬರಿಗೇ ಏಕೆ ಬಿಡುಗಡೆ? ತನ್ನ ಪರಿಜನರು ಇರುವಲ್ಲಿ ದೇವಿ ನಿನ್ನನ್ನೇ, ಏಕೆ ಕಳುಹಿಸಿದಳು?' ಎಂದೆಲ್ಲ ಅವಳು ನಿನ್ನನ್ನು ಕೇಳಿರಬಹುದು.

ವಿದೂಷಕ—ಕೇಳದೆ ಉಂಟೆ? ಪ್ರತ್ಯುತ್ಪನ್ನಮತಿಯಾದ ನನಗೆ ಒಡನೆಯೇ ಉತ್ತರವೂ ಹೊಳೆಯಿತು. ಹೇಳಿದೆ.

ರಾಜ—ಏನು ಹೇಳಿದೆ?

ವಿದೂಷಕ—ನಾನು ಹೇಳಿದೆ: "ಜೋಯಿಸರು 'ನಿಮ್ಮ ನಕ್ಷತ್ರಕ್ಕೆ ಈಗ ದುಷ್ಟಗ್ರಹ ಪೀಡೆ. ಅದಕ್ಕಾಗಿ ಸೆರೆಯಲ್ಲಿರುವ ಬಂದಿಗಳನ್ನೆಲ್ಲ ಬಿಡುಗಡೆ ಮಾಡಬೇಕು' ಎಂದು ಮಹಾರಾಜನಿಗೆ ವಿಜ್ಞಾಪಿಸಿದರು.

ರಾಜ—(ಸಂತೋಷದಿಂದ) ಆಮೇಲೆ ಆಮೇಲೆ?

ವಿದೂಷಕ—ಅದನ್ನು ಕೇಳಿ ಇರಾವತಿಯ ಮನಸ್ಸು ನೋಯಿಸಬಾರದೆಂದು ಯೋಚಿಸಿ ದೇವಿ ನನ್ನೊಡನೆ "ಗೌತಮ, ಮಹಾರಾಜನು ಬಿಡಿಸುತ್ತಿರುವನೆಂದು ಹೇಳಿ ನೀನೇ ಇವರನ್ನು ಬಿಡಿಸು" ಎಂದು ನನ್ನನ್ನು ಕಳುಹಿಸಿರುವಳು—ಎಂದು ಹೇಳಿದೆ.

ರಾಜ—(ವಿದೂಷಕನನ್ನು ತಬ್ಬಿಕೊಂಡು) ಮಿತ್ರ, ನನ್ನ ಮೇಲೆ ನಿನಗೆ ಎಷ್ಟು ಪ್ರೀತಿ!

ಬರಿಯ ಬುದ್ಧಿಯ ಗುಣದೆ ಮಿತ್ರರಭೀಷ್ಟಸಿದ್ಧಿವುದಾಗದು
ಕಾರ್ಯಸಿದ್ಧಿಯ ಸೂಕ್ಷ್ಮಪಥದೊಳು ನೆರವ ಸ್ನೇಹವೃಮೀವುದು. ೬

ವಿದೂಷಕ—ತ್ವರೆಮಾಡು, ಮಾಳವಿಕೆಯನ್ನು ಪ್ರಿಯಸಖಿಯೊಡನೆ ಸಮುದ್ರ ಗೃಹದಲ್ಲಿ ಬಿಟ್ಟು ನಿನಗಾಗಿ ನಾನಿಲ್ಲಿಗೆ ಬಂದೆ.

ರಾಜ—ನಾನೇ ಹೋಗಿ ಅವಳನ್ನು ಸತ್ಕರಿಸುತ್ತೇನೆ. ನೀನು ಮುಂದೆ ನಡೆ.

ವಿದೂಷಕ—ಬಾ, ಹಾಗಾದರೆ. (ಮುಂದೆ ನಡೆವ) ಇದೇ ಸಮುದ್ರಗೃಹ.

ರಾಜ—(ಶಂಕೆಗೊಂಡು) ವಯಸ್ಯ, ಇದೊ ಇರಾವತಿಯ ಪರಿಚಾರಿಕೆಯಾದ ಚಂದ್ರಿಕೆ ಹೂಗಳನ್ನು ಬಿಡಿಸುತ್ತ ಈ ಕಡೆಗೇ ಬರುತ್ತಿದಾಳೆ. ನಾವು ಈ ಗೋಡೆಯ ಹಿಂದೆ ಮರೆಯಾಗೋಣ.

ವಿದೂಷಕ—ಆಹಾ! ಕಳ್ಳರೂ ಕಾಮುಕರೂ ಚಂದ್ರಿಕೆಯನ್ನು ಪರಿಹರಿಸಲೇ ಬೇಕಷ್ಟೆ. (ಇಬ್ಬರೂ ಮರೆಯಾಗುವರು.)

ರಾಜ—ಗೌತಮ, ನಿನ್ನ ಸಖಿ ನನ್ನನ್ನು ಹೇಗೆ ಎದುರು ನೋಡುತ್ತಿರುವ ಳೆಂಬುದನ್ನು ಈ ಗವಾಕ್ಷಿಯಿಂದ ನೋಡೋಣ ಬಾ.

ವಿದೂಷಕ—ಆಗಬಹುದು. (ಇಬ್ಬರೂ ನೋಡುತ್ತಿರುವರು.)

(ಬಳಿಕ ಮಾಳವಿಕೆ ಬಕುಳಾವಳಿಕೆಯರು ಪ್ರವೇಶಿಸುವರು.)

ಬಕುಳಾವಳಿಕೆ—ಸಖಿ, ಒಡೆಯನಿಗೆ ನಮಸ್ಕಾರಮಾಡು.

ರಾಜ—ನನ್ನ ಚಿತ್ರವನ್ನು ಅವಳಿಗೆ ತೋರಿಸುತ್ತಾ ಈಕೆ ಹೀಗೆ ಹೇಳು ತ್ತಿದ್ದಾಳೆಂದು ತೋರುವುದು.

ಮಾಳವಿಕೆ—(ಹರ್ಷದಿಂದ) ನಮಸ್ತೇ! (ಬಾಗಿಲ ಕಡೆ ನೋಡಿ ವಿಷಾದದಿಂದ) ಒಡೆಯನು ಎಲ್ಲಿ? ಸಖಿ, ನನ್ನನ್ನು ಮೋಸಗೊಳಿಸುತ್ತಿದೀಯಾ?

ರಾಜ—ವಯಸ್ಯ, ಇವಳ ಹರ್ಷ ವಿಷಾದಗಳಿಂದ ನಾನು ಪ್ರೀತನಾದೆ.

ಸೂರ್ಯನುದಯಾಸ್ತದೊಳುತಾನಿರ್ತರನ ಬಗೆಯನು ತಳೆವ ಬೆಳ್ದಾವರೆಯೊಲು
ಒಂದೆಚಣದೊಳು ಭಾವವರ್ತರನಾದುದೊಗೆದುದುಚಾರುಗಾತ್ರಿಯ ಮೊಗದೊಳು.

ಬಕುಳಾವಳಿಕೆ—ಸಖಿ, ಒಡೆಯನು ಚಿತ್ರದಲ್ಲಿರುವನಲ್ಲವೆ?

ಇಬ್ಬರೂ—(ಬಾಗಿ) ಮಹಾರಾಜನಿಗೆ ಜಯವಾಗಲಿ.

ಮಾಳವಿಕೆ—ಸಖಿ, ನಾನು ಸಮ್ಮುಖದಲ್ಲಿ ನಿಂತು ಒಡೆಯನ ರೂಪವನ್ನು ನೋಡಿದಾಗ ಈಗಿನಂತೆ ನನಗೆ ತೃಪ್ತಿಯೇ ಆಗಲಿಲ್ಲ.

ವಿದೂಷಕ—ಕೇಳಿದೆಯಾ ವಯಸ್ಯ, ಚಿತ್ರದಲ್ಲಿ ನೀನು ಹೇಗೆ ಕಾಣು ವೆಯೋ ಹಾಗೆ ಇವಳಿಗೆ ಆಗ ಸಾಕ್ಷಾತ್ತಾಗಿ ಕಾಣಿಸಲಿಲ್ಲವಂತೆ. ಈಗ ನಿನ್ನ ಯೌವನಗರ್ವ ಪೆಟ್ಟಿಗೆಯಲ್ಲಿನ ರತ್ನಾಭರಣದಂತೆ ವ್ಯರ್ಥ ವಾಯಿತು.

ರಾಜ—ಮಿತ್ರ, ಕುತೂಹಲಿಗಳಾದರೂ ಸ್ತ್ರೀಯರು ಸಹಜ ಲಜ್ಜಾವತಿಯರು. ನೋಡು—

ಪ್ರಥಮ ಸಂದರ್ಶನದೊಳಂಗನೆಯಿರೋಪರನು
ಸಲೆ ನೋಳ್ಪ ಬಯಕೆ ಬಲಿದಿರ್ದರೇನು
ನಾಣೊದವಿಬರಲಂತು ನೋಳ್ಪರಿನಿಯರನೆಂತು
ತೋರಗಣ್ಣಳನೆಸೆದು ತಾಂ ಸಮಂತು. ೮

ಮಾಳವಿಕೆ—ಸಖಿ, ಮುಖವನ್ನು ಕೊಂಚ ಆ ಕಡೆಗೆ ತಿರುಗಿಸಿಕೊಂಡು ಒಡೆಯನ ಸ್ನೇಹದೃಷ್ಟಿಗೆ ಪಾತ್ರಳಾದ ಈಕೆ ಯಾರು?

ಬಕುಳಾವಳಿಕೆ—ಪಕ್ಕದಲ್ಲಿರುವ ಈಕೆ ಇರಾವತಿಯಲ್ಲವೆ?

ಮಾಳವಿಕೆ—ಸಖಿ, ಒಡೆಯನು ದಾಕ್ಷಿಣ್ಯಪರನಲ್ಲವೆಂದು ನನಗೆ ತೋರು ತ್ತದೆ. ಇತರ ದೇವಿಯರೆಲ್ಲರನ್ನೂ ಬಿಟ್ಟು ಇವಳೊಬ್ಬಳ ಮುಖ ವನ್ನೇ ನಿಟ್ಟಿಸುತ್ತಿರುವನಲ್ಲ!

ಬಕುಳಾವಳಿಕೆ—(ತನಗೆ ತಾನೆ) ಚಿತ್ರದಲ್ಲಿ ಒಡೆಯನನ್ನು ನೋಡಿ ನಿಜ ವಾಗಿಯೂ ಒಡೆಯನೇ ಹೀಗೆ ಇದಾನೆ ಎಂದು ತಿಳಿದು ಈಕೆ ಕರುಬು ತ್ತಿದಾಳೆ. ಇರಲಿ, ಇವಳೊಳನೆ ಸ್ವಲ್ಪ ಕೀಟಲೆ ಮಾಡುವೆನು. (ಗಟ್ಟಿ ಯಾಗಿ) ಸಖಿ, ಈಕೆ ಒಡೆಯನ ಪ್ರೀತಿಗೆ ಪಾತ್ರಳಾದವಳು.

ಮಾಳವಿಕೆ—ಹಾಗಾದರೆ ನಾನೇಕೆ ಸುಮ್ಮನೆ ಆಯಾಸಪಡಲಿ? (ಸಿಡುಕಿ ನಿಂದ ಮೊಗದಿರುಹುವಳು.)

ರಾಜ—ವಯಸ್ಯ, ನೋಡು ನೋಡು; ನಿನ್ನ ಗೆಳತಿಯ ಮುಖವನ್ನು—

ಬಗಿದ ಹುಬ್ಬಿನೊಳಾಹ ತಿಲಕವು ಕಿಡಲು ಕೆಳದುಟಿಯದುರಲು
ಒಗೆದ ಕರುಬಿನೊಳಿವಳು ಮೊಗವನು ಭರದೆ ಬಾಗಿಸಿ ತಿರುಹಲು
ತಪ್ಪುಗೈದೋಪರೊಳು ಮುನಿವುದನೋಜರರುಹಿದ ಪರಿಯೊಳು
ಲಲಿತವಾದಭಿನಯಗಳಿಂದಿವಳಿದಿಗೊ ತೋರುವೊಲಿರುವಳು. ೯

ವಿದೂಷಕ—ಇವಳನ್ನು ಸಮಾಧಾನಪಡಿಸುವುದಕ್ಕೆ ಸಿದ್ಧನಾಗು.

ಮಾಳವಿಕೆ—ಆರ್ಯ ಗೌತಮನು ಸಹ ಇಲ್ಲಿಯೇ ಒಡೆಯನನ್ನು ಓಲೈಸುತ್ತಿದಾನೆ. (ಮರಳಿ ಬೇರೊಂದೆಡೆಗೆ ಹೋಗಬಯಸುವಳು.)

ಬಕುಳಾವಳಿಕೆ—(ಮಾಳವಿಕೆಯನ್ನು ತಡೆದು) ಈಗ ನೀನು ಮುನಿಸಿಕೊಂಡಿಲ್ಲ ತಾನೆ!

ಮಾಳವಿಕೆ—ನಾನು ಹೆಚ್ಚು ಹೊತ್ತು ಮುನಿಸಿಕೊಳ್ಳುಪವಳೆಂದು ನೀನು ತಿಳಿದಿದ್ದರೆ, ಇದೋ ಆ ಮುನಿಸನ್ನು ಇಲ್ಲಿಗೆ ಬಿಟ್ಟೆ.

ರಾಜ—(ಬಳಿಗೆ ಬಂದು)

ಉತ್ಪಲನೇತ್ರೆಯೆ ಚಿತ್ರಾರ್ಪಿತವಹ ಚೇಷ್ಟೆಗಿದೇತಕೆ ಮುನಿದಿರುವೆ
ನಿನ್ನೊಬ್ಬಳಿಗೆಯೆ ಕಿಂಕರನಾದೀ ನಾನೇ ಬಳಿಯೊಳು ನಿಂದಿರುವೆ. ೧೦

ಬಕುಳಾವಳಿಕೆ—ಜಯವಾಗಲಿ, ಮಹಾರಾಜನಿಗೆ.

ಮಾಳವಿಕೆ—(ತನಗೆ ತಾನೆ) ಚಿತ್ರದಲ್ಲಿ ಬರೆದ ಒಡೆಯನಿಗೆ ನಾನೇಕೆ ಕರುಬಿದೆನೊ! (ನಾಚಿ ತಲೆಬಾಗಿ ಕೈ ಜೋಡಿಸುವಳು. ರಾಜನು ಮದನ ಕಾತರತೆಯನ್ನು ರೂಪಿಸುವನು.)

ವಿದೂಷಕ—ಇದೇಕೆ ಉದಾಸೀನನಂತೆ ತೋರುವೆಯಲ್ಲ.

ರಾಜ—ನಿನ್ನ ಗೆಳತಿಯ ಅವಿಶ್ವಸನೀಯತೆಯೇ ಅದಕ್ಕೆ ಕಾರಣ.

ವಿದೂಷಕ—ನಿನಗೇಕೆ ಇವಳಲ್ಲಿ ಅವಿಶ್ವಾಸ?

ರಾಜ—ಕೇಳು—

ನಯನಪಥದೊಳು ಸಿಲುಕಿದರುಮಿವಳೊಂದೆ ಚಣದೊಳದೃಶ್ಯಳಾದಪಳು
ತೋಳತೆಕ್ಕೆಯೊಳೆಳೆದುಕೊಂಡರುಮಬಲೆಯೊಡನೆಯೆ ನಯದೆ ಜಾರುವಳು
ಮದನರುಜೆಯೊಳು ನೊಂದ ಮನವನು ಮಿಲನವಾಯಿಯಿನಿಂತು ಕಾಡುವಳು
ಎಂತು ವಿಶ್ವಾಸವನು ನಾನಿಡಬಹುದು ಹೇಳೈ ಇಂಥ ಸುದತಿಯೊಳು. ೧೧

ಬಕುಳಾವಳಿಕೆ—ಸಖಿ, ಒಡೆಯನು ಅನೇಕ ಸಲ ನಿನ್ನಿಂದ ಮೋಸಹೋಗಿರುವನು. ಅದರಿಂದ ಈಗ ನೀನು ವಿಶ್ವಾಸಪರಳಾಗಬೇಕು.

ಮಾಳವಿಕೆ—ಸಖಿ, ಮಂದಭಾಗ್ಯಳಾದ ನನಗೆ ಒಡೆಯನ ಸಮಾಗಮ ಕನಸಿನಲ್ಲಿಯೂ ದುರ್ಲಭವಾಯಿತು.

ಬಕುಳಾವಳಿಕೆ—ಒಡೆಯರು ಈಕೆಗೆ ಉತ್ತರ ಕೊಡಬೇಕು.

ರಾಜ—

ನಿನ್ನ ಸಖಿಗಾನೆನ್ನನಿತ್ತಿಹೆನಂಗಜಾಗ್ನಿಸ
　　ಮಕ್ಷದೊಳು ಎನೆ ಮತ್ತಿನುತ್ತರವೇನಿದೆ
ಸೇವ್ಯನೆನುವಂದದೊಳು ನಾನಿಂದಾಕೆಗೆನಿಸೆನು
　　ಸೇವಕನೆ ನಾನಹೆನು ಮತ್ತೇಕಾಂತದೆ. ೧೨

ಬಕುಳಾವಳಿಕೆ—ಅನುಗೃಹೀತರಾದೆವು.

ವಿದೂಷಕ—(ನಡಗರಗೊಂಡು) ಈ ಜಿಂಕೆಮರಿ ಅಶೋಕ ವೃಕ್ಷದ ಚಿಗುರನ್ನು ಮೇಯುತ್ತಿದೆ. ಬಾ, ಅದನ್ನು ನಿವಾರಿಸೋಣ.

ಬಕುಳಾವಳಿಕೆ—ಆಗಲಿ (ತೆರಳುವಳು.)

ರಾಜ— ವಯಸ್ಯ, ನಮ್ಮ ರಕ್ಷಣೆಯಲ್ಲಿ ನೀನು ಹೀಗೆಯೇ ಎಚ್ಚರಿಕೆಯಿಂದಿರಬೇಕು.

ವಿದೂಷಕ—ಈ ಗೌತಮನಿಗೆ ಇದನ್ನೂ ಹೇಳಬೇಕೆ?

ಬಕುಳಾವಳಿಕೆ—ಆರ್ಯಗೌತಮ, ನಾನು ಮರೆಯಲ್ಲಿರುವೆನು. ನೀನು ದ್ವಾರರಕ್ಷಕನಾಗಿರು.

ವಿದೂಷಕ—ಆಗಬಹುದು.

(ಬಕುಳಾವಳಿಕೆ ಹೋಗುವಳು.)

ವಿದೂಷಕ—(ಮುಂದೆ ನಡೆದು ನೋಡಿ) ನಾನು ಈ ಸ್ಫಟಿಕಶಿಲೆಯ ಮೇಲೆ ವಿಶ್ರಮಿಸಿಕೊಳ್ಳುವೆನು. (ಒರಗಿಕೊಳ್ಳುವನು) ಆಹಾ! ಈ ಸುಂದರ ಶಿಲೆಯ ಸ್ಪರ್ಶ ಎಷ್ಟು ಹಿತವಾಗಿದೆ. (ನಿದ್ರಿಸುವನು.)

(ಮಾಳವಿಕೆ ನಡುಗುತ್ತ ನಿಲ್ಲುವಳು)

ರಾಜ—

ಸುಂದರಿಯೆ ಬಿಟ್ಟುಕಳೆ ಸಂಗಮದ ಭೀತಿಯನು
ಬಹುಕಾಲದಿಂದೊಲುಮೆಗೆಳಸಿರುವೆನು
ಮಲ್ಲಿಗೆಯು ಬಳ್ಳಿಯೊಂದಂದವನು ತಳೆ ನೀನು
ನಾನಿಂದು ಮಾಮರದ ತೆರದೊಳಿಹೆನು. ೧೩

ಮಾಳವಿಕೆ—ದೇವಿಯ ಹೆದರಿಕೆಯಿಂದ ನನಗೆ ಪ್ರಿಯವಾದುದನ್ನೂ ನಾನು ಮಾಡಲಾರದವಳಾಗಿದೇನೆ.

ರಾಜ—ಹೆದರಬೇಡ, ಹೆದರಬೇಡ.

ಮಾಳವಿಕೆ—(ಉಪಹಾಸಮಾಡಿ) ಈಗ ಹೀಗೆ ನಿರ್ಭೀತರಾಗಿರುವ ಒಡೆಯರ ಧೈರ್ಯವನ್ನು ಇರಾವತಿಯ ಸಮ್ಮುಖದಲ್ಲಿ ಚೆನ್ನಾಗಿ ಕಂಡಿದೇನೆ.

ರಾಜ—

ದಾಕ್ಷಿಣ್ಯವೆನುವುದಿದು ಓವೊ ಬಿಂಬಾಧರೆಯೆ
ಬೈಂಬಿಕನೃಪಾಲರೊಳು ಕುಲನಿಯಮವು
ನನ್ನ ಜೀವಿತಕಿಂದು ಹೇ ದೀರ್ಘಲೋಚನೆಯೆ
ನಿನ್ನನುಗ್ರಹದಿಂದಲವ್ವುಮುಳಿವು. ೧೪

ಆದ್ದರಿಂದ ಚಿರಾನುರಕ್ತನಾದ ನನ್ನನ್ನು ಅನುಗ್ರಹಿಸು. (ಆಲಿಂಗಿಸ ಹೋಗುವನು. ಮಾಳವಿಕೆ ನಾಟ್ಯದಿಂದ ಪರಿಹರಿಸುವಳು.)

ರಾಜ—(ತನಗೆ ತಾನೆ) ಆಹ! ನವಾಂಗನೆಯರ ಮದನಚೇಷ್ಟೆ ಎಷ್ಟು ಸೊಗಸು!

ಡಾಬಿನೆಡೆಯೊಳು ಬೆರಲನಾಡಿಸುವೆನ್ನ ಕೈಯನು ನಡುಗುತಾಹಾ ತಡೆವಳು
ಸೆಳೆದು ಬಲ್ಮೆಯಿನಪ್ಪಲೆಳಸುವೊಡಾಹ ಕೈಗಳಿನೆದೆಯ ಮರೆಗೈದಿರುವಳು
ಮುತ್ತನಿಡಲಿರೆ ತಿರುಗಿಸುವಳಹ ತುರುಗಲೆವೆಗಳ ಕಂಗಳೊಪ್ಪುವ ಮೊಗವನು
ಒಪ್ಪಿದಪಳಹ ತೀರ್ಚುತೀನೆವದಿಂದಲೆನ್ನಭಿಲಾಷಪೂರಣಸುಖವನು. ೧೫

(ಬಳಿಕ ಇರಾವತಿ ನಿಪುಣಿಕೆಯೊಡನೆ ಪ್ರವೇಶಿಸುವಳು.)

ಇರಾವತಿ—ಸಖಿ, ನಿಪುಣಿಕೆ, ಸಮುದ್ರಗೃಹದ ಹೊಸ್ತಿಲಿನಲ್ಲಿ ಆರ್ಯ ಗೌತಮನು ಏಕಾಕಿಯಾಗಿದ್ದುದನ್ನು ಕಂಡೆನೆಂದು ಚಂದ್ರಿಕೆ ನಿನಗೆ ಹೇಳಿದ್ದು ದಿಟವೆ?

ನಿಪುಣಿಕೆ—ದಿಟವಲ್ಲದಿದ್ದರೆ ಒಡತಿಗೆ ಅರಿಕೆ ಮಾಡುತ್ತಿದ್ದೆನೆ?

ಇರಾವತಿ—ಹಾಗಾದರೆ ಅಲ್ಲಿಗೆ ಹೋಗೋಣ. ಪ್ರಾಣಸಂಶಯದಿಂದ ಪಾರಾದ, ಆರ್ಯಪುತ್ರನ ಆ ಪ್ರಿಯಮಿತ್ರನ ಕುಶಲವನ್ನು ಕೇಳೋಣ. ಅಲ್ಲದೆ . . . .

ನಿಪುಣಿಕೆ—ಒಡತಿಯ ಮಾತು ಪೂರ್ಣವಾದಂತಿಲ್ಲ.

ಇರಾವತಿ—ಅಲ್ಲದೆ, ಚಿತ್ರದಲ್ಲಿರುವ ಆರ್ಯಪುತ್ರನ ಕ್ಷಮೆ ಬೇಡೋಣ.

ನಿಪುಣಿಕೆ—ಹಾಗಾದರೆ ಭರ್ತನನ್ನೇ ಸಾಕ್ಷಾತ್ತಾಗಿ ಏಕೆ ನೋಡಬಾರದು?

ಇರಾವತಿ—ಮುಗ್ಧೆ, ಚಿತ್ರದಲ್ಲಿರುವ ಭರ್ತನಿಗೂ ಅನ್ಯ ಸಂಕ್ರಾಂತ ಹೃದಯನಾದ ಭರ್ತನಿಗೂ ಏನೂ ವ್ಯತ್ಯಾಸವಿಲ್ಲ. ಈ ಪ್ರಯತ್ನ ಆತನಲ್ಲಿ ನಾನು ಮಾಡಿದ ಅಪಚಾರವನ್ನು ಅಳಿಸುವುದಕ್ಕಾಗಿ ಮಾತ್ರ.

ನಿಪುಣಿಕೆ—ಒಡತಿ, ಹೀಗೆ, ಹೀಗೆ ಬರಬೇಕು.

ಚೇಟಿ—(ಪ್ರವೇಶಿಸಿ) ಜಯವಾಗಲಿ ಒಡತಿಗೆ. ದೇವಿಯವರು, "ಇದು ನನಗೆ ಮತ್ಸರಕ್ಕೆ ಕಾರಣವಲ್ಲ. ಕೇವಲ ನಿನ್ನ ಗೌರವವನ್ನು ಬೆಳೆಸುವ ಸಲುವಾಗಿ ಮಾಳವಿಕೆಯನ್ನೂ ಅವಳ ಸಖಿಯನ್ನೂ ಸಂಕೋಲೆ ತೊಡಿಸಿ ಸೆರೆಯಲ್ಲಿಡಿಸಿದೆನು. ನೀನು ಒಪ್ಪುವುದಾದರೆ ಆರ್ಯಪುತ್ರನಲ್ಲಿ ನಿನ್ನ ಪರವಾಗಿ ಅರಿಕೆ ಮಾಡುವೆನು. ನಿನ್ನ ಇಷ್ಟವನ್ನು ತಿಳಿಸು" ಎಂದು ಹೇಳಿದರು.

ಇರಾವತಿ—ನಾಗರಿಕೆ, "ದೇವಿಯನ್ನು ನಿಯೋಜಿಸುವುದಕ್ಕೆ ನಾವು ಯಾರು? ಪರಿಜನರನ್ನು ನಿಗ್ರಹಿಸಿ ದೇವಿ ನನ್ನಲ್ಲಿ ಸ್ನೇಹವನ್ನು ತೋರಿದ್ದಾಳೆ. ಮತ್ತೆ ಯಾರ ಪ್ರಸಾದದಿಂದ ನಾನು ವರ್ಧಿಸುತ್ತಿದೇನೆ." ಎಂದು ದೇವಿಯವರಿಗೆ ಅರಿಕೆಮಾಡು.

ಚೇಟಿ—ಅಪ್ಪಣೆ (ತೆರಳುವಳು.)

ನಿಪುಣಿಕೆ—(ಮುಂಬರಿದು) ಇದೋ, ನೋಡು ಒಡತಿ, ಸಮುದ್ರಗೃಹ ದ್ವಾರದಲ್ಲಿ ಆರ್ಯಗೌತಮನು ಅಂಗಡಿಬೀದಿಯ ಗೂಳಿಯಂತೆ ಕುಳಿತೇ ನಿದ್ರೆ ಮಾಡುತ್ತಿದ್ದಾನೆ.

ಇರಾವತಿ—ಅಯ್ಯೋ, ಪಾಪ! ವಿಷವಿಕಾರ ಇನ್ನೂ ನಿಶ್ಶೇಷವಾಗಿ ಹೋಗಿಲ್ಲದಿರಬಹುದು.

ನಿಪುಣಿಕೆ—ಮುಖದ ಕಳೆ ಚೆನ್ನಾಗಿಯೇ ಇದೆ. ಮೇಲಾಗಿ ಚಿಕಿತ್ಸೆ ಮಾಡಿದವನು ಧ್ರುವಸಿದ್ಧಿಯಲ್ಲವೆ? ಆದುದರಿಂದ ಇವನಿಗೆ ಕೇಡಾದೀ ತೆಂಬ ಶಂಕೆ ಬೇಡ.

ವಿದೂಷಕ—(ಕನವರಿಸುತ್ತ) ಪೂಜ್ಯ ಮಾಳವಿಕೆ!

ನಿಪುಣಿಕೆ—ಒಡತಿ, ಕೇಳಿದೆಯಾ! ಈ ಹತಾಶನು ಏನು ಆಡುತ್ತಿದಾನೆ? ನಮ್ಮ ಕೆಲಸವನ್ನು ಮಾಡಿಯಾನೆಂದು ಈ ಕಳ್ಳನನ್ನು ನಂಬುವು ದಾದರೂ ಹೇಗೆ? ಯಾವಾಗಲೂ ಇಲ್ಲಿಯೆ ಸ್ವಸ್ತಿವಾಚನದ ಮೋದಕಗಳಿಂದ ಹೊಟ್ಟೆತುಂಬಿಸಿಕೊಳ್ಳುವ ಈತ ಈಗ ಮಾಳವಿಕೆ ಯನ್ನು ಕನವರಿಸುತ್ತಿದಾನೆ.

ವಿದೂಷಕ—ಇರಾವತಿಯನ್ನು ಮೀರಿಸುವವಳಾಗು.

ನಿಪುಣಿಕೆ—ಈ ಅತ್ಯಾಹಿತವನ್ನು ಕೇಳಿದೆಯ? ಕಂಬದ ಮರೆಯಲ್ಲಿ ಅವಿ ತಿದ್ದು, ಹಾವಿಗೆ ಹೆದರುವ ಈ ಬ್ರಹ್ಮಬಂಧುವನ್ನು ಹಾವಿನಂತೆ ಡೊಂಕಾಗಿರುವ ಕೋಲಿನಿಂದ ಹೆದರಿಸುತ್ತೇನೆ.

ಇರಾವತಿ—ಈ ಕಿತವನಿಗೆ ಹಾವು ಕಡಿದರೂ ತಪ್ಪಲ್ಲ.

(ನಿಪುಣಿಕೆ ವಿದೂಷಕನ ಮೇಲೆ ಕೋಲು ಬೀಳಿಸುತ್ತಾಳೆ.)

ವಿದೂಷಕ—(ಥಕ್ಕನೆ ಎದ್ದು) ಅಯ್ಯಯ್ಯೋ, ಕಷ್ಟ, ಕಾಪಾಡು ಮಿತ್ರ. ನನ್ನ ಮೇಲೆ ಹಾವು ಬಿತ್ತು.

ರಾಜ—(ತಟ್ಟನೆ ಬಂದು) ಹೆದರಬೇಡ, ಹೆದರಬೇಡ.

ಮಾಳವಿಕೆ—(ಹಿಂಬಾಲಿಸಿ ಬಂದು) ದೇವ, ಹಾಗೆ ತಟ್ಟನೆ ಹತ್ತಿರ ಹೋಗ ಬೇಡ. ಹಾವೆಂದು ಹೇಳುತ್ತಿರುವನು.

ಇರಾವತಿ—ಆಹಾ! ಕಷ್ಟ, ಕಷ್ಟ; ಭರ್ತನೂ ಈ ಕಡೆಗೇ ಧಾವಿಸಿ ಬರು ತ್ತಿರುವನು.

ವಿದೂಷಕ—(ನಗುತ್ತ) ಅಯ್ಯೋ, ಇದು ಒಂದು ಸೌದೆ ತುಂಡು, ಹಾವಲ್ಲ. ಹಾವು ಕಚ್ಚಿತೆಂದು ಕೇದಗೆ ಮುಳ್ಳಿನಿಂದ ಗಾಯಗೊಳಿಸಿಕೊಂಡುದು ಈಗ ನಿಜವಾಗಿಯೂ ಫಲಿಸಿತೇನೋ ಎಂದು ಹೆದರಿದೆ.

ಬಕುಳಾವಳಿಕೆ—(ತೆರೆಯೊಳಗಿನಿಂದ ತಟಕ್ಕನೆ ಬಂದು) ಒಡೆಯ, ಅಲ್ಲಿ ಹೋಗ

ಬೇಡ. ಅಲ್ಲಿ ಏನೋ ಡೊಂಕು ಡೊಂಕಾಗಿ ಹರಿಯುವ ಹಾವಿನಂತೆ ಕಾಣಿಸುತ್ತಿದೆ.

ಇರಾವತಿ—(ಒಡನೆಯ ರಾಜನ ಬಳಿಸಾರಿ) ನಿಮ್ಮಿಬ್ಬರ ಹಗಲ ಸಂಕೇತ ನಿರ್ವಿಘ್ನವಾಗಿ ನೆರವೇರಿ ಮನೋರಥ ಈಡೇರಿತು ತಾನೆ?

(ಇರಾವತಿಯನ್ನು ಕಂಡು ಎಲ್ಲರೂ ಸಂಭ್ರಾಂತರಾಗುವರು.)

ರಾಜ—ಪ್ರಿಯೆ, ಇದೇನು ಹೊಸ ಉಪಚಾರ!

ಇರಾವತಿ—ಬಕುಳಾವಳಿಕೆ, ದೂತಿಯಾಗಿ ಅಧಿಕಾರ ನಡಸಿದ ನಿನ್ನ ಪ್ರತಿಜ್ಞೆ ಫಲಿಸಿತಷ್ಟೆ!

ಬಕುಳಾವಳಿಕೆ—ಕ್ಷಮಿಸಿ ಒಡತಿ. ಕಪ್ಪೆಗಳು ವಟಗುಟ್ಟುತ್ತವೆ ಎಂದು ದೇವೇಂದ್ರನು ಭೂಮಿಗೆ ಮಳೆಗರೆಯುವುದನ್ನು ಮರೆಯುವನೆ?

ವಿದೂಷಕ—ಹೋಗಲಿ, ಬಿಡು. ನಿನ್ನ ದರ್ಶನಮಾತ್ರದಿಂದಲೆ ಪೂಜ್ಯನು ನಿನ್ನ ಅವಿನಯವನ್ನೆಲ್ಲ ಮರೆತುಬಿಟ್ಟನು. ನೀನು ಮಾತ್ರ ಇನ್ನೂ ಪ್ರಸನ್ನಳಾಗದೆಯೇ ಇದ್ದೀಯೆ.

ಇರಾವತಿ—ಕೋಪಿಸಿ ತಾನೆ ನಾನು ಏನು ಮಾಡುವ ಹಾಗಿದೇನೆ?

ರಾಜ—ನೀನು ಹೇಳುವುದು ನಿಜ; ನಿನ್ನ ಕೋಪ ಅಸ್ಥಾನ ಕೋಪವಲ್ಲ.

ನಿನ್ನ ಮುಖವಿದು ಹೇ ವರಾಂಗಿಯೆ, ಎಂದು ಒರ್ಕಣವಾದರೂ
ಅನಿಮಿತ್ತ ಕೋಪವನಾಂತಿದೆ?
ರಜನಿ ಹುಣ್ಣಿಮೆ ದಿನದೊಳಲ್ಲದೆ ಹೇಳು ರಾಹುಗ್ರಸ್ತ
ಶಶಿಮಂಡಲವ ತಾನಾಂತಿರ್ಪುದೆ. ೧೬

ಇರಾವತಿ—'ಅಸ್ಥಾನ' ಎಂದು ಆರ್ಯಪುತ್ರನು ಹೇಳಿದ ಮಾತು ತುಂಬ ಸರಿ. ನಮ್ಮ ಭಾಗ್ಯವೆಲ್ಲ ಅನ್ಯರ ಪಾಲಾದ ಮೇಲೂ ಕೋಪ ಮಾಡಿಕೊಂಡರೆ ಹಾಸ್ಯಕ್ಕೆ ಗುರಿಯಾದೇನು.

ರಾಜ—ನೀನು ಅನ್ಯಥಾ ಕಲ್ಪಿಸಿಕೊಳ್ಳುತ್ತಿದ್ದೀಯೆ. ನನಗಂತೂ ನಿಜವಾಗಿಯೂ ನಿನ್ನ ಕೋಪಕ್ಕೆ ಕಾರಣ ಕಾಣುತ್ತಿಲ್ಲ.

ಏಕೆಂದರೆ—

ಉತ್ಸವದ ದಿನಗಳಲಿ ಅಪರಾಧವೆಸಗಿದರು
ಪರಿಜನರ ದಂಡಿಪುದು ತಗದೆಂದು ಬಗೆದು
ನಾನೆ ಸೆರೆ ಬಿಡಿಸಿರುವ ನನ್ನ ಸೇವಕರಿವರು
ಬಂದಿಹರು ಗೌರವವ ಸಲಿಸಲೆನಗಿಂದು. ೧೭

ಇರಾವತಿ—ನಿಪುಣಿಕೆ, ಹೋಗು. ನಿನ್ನ ಪಕ್ಷಪಾತವನ್ನು ಈಗ ತಾನೆ ಸ್ಪಷ್ಟವಾಗಿ ಕಂಡುಕೊಂಡೆನೆಂದು ದೇವಿಗೆ ವಿಜ್ಞಾಪಿಸು.

ನಿಪುಣಿಕೆ—ಅಪ್ಪಣೆ (ಎಂದು ತೆರಳುವಳು)

ವಿದೂಷಕ—(ತನಗೆ ತಾನೆ) ಅಯ್ಯೋ, ಅನರ್ಥವಾಯಿತು. ಬಂಧನದಿಂದ ಬಿಡುಗಡೆ ಹೊಂದಿದ ಪಾರಿವಾಳ ಹೆಣ್ಣು ಬೆಕ್ಕಿನ ಬಾಯಿಗೆ ಬಿತ್ತು.

ನಿಪುಣಿಕೆ—(ಪ್ರವೇಶಿಸಿ, ಯಾರಿಗೂ ಕೇಳಿಸದಂತೆ) ಒಡತಿ, ಆಕಸ್ಮಿಕವಾಗಿ ಮಾಧವಿಕೆ ಸಿಕ್ಕಿ ನನಗೆ ಹೇಳಿದಳು. ಇದು ನಡೆದುದು ಹೀಗಂತೆ! (ಕಿವಿಯಲ್ಲಿ ಹೇಳುವಳು.)

ಇರಾವತಿ—(ತನಗೆ ತಾನೆ) ಸರಿ, ತಿಳಿಯಿತು. ಇದೆಲ್ಲ ಈ ಬ್ರಹ್ಮಬಂಧು ಹೂಡಿದ ಹೂಟವೇ! (ವಿದೂಷಕನ ಕಡೆ ನೋಡಿ, ಗಟ್ಟಿಯಾಗಿ) ಇದು ಈ ಕಾಮತಂತ್ರಸಚಿವನ ನೀತಿ.

ವಿದೂಷಕ—ಪೂಜ್ಯಳೆ, ನೀತಿಯ ಒಂದಕ್ಷರವನ್ನಾದರೂ ನಾನು ಓದಿದ್ದರೆ ಗಾಯತ್ರಿಯನ್ನು ಮರೆತು ಬಿಡುತ್ತಿದ್ದೆ.

ರಾಜ—(ತನಗೆ ತಾನೆ) ಈ ಸಂಕಟದಿಂದ ಹೇಗೆ ತಾನೆ ನಾನು ತಪ್ಪಿಸಿಕೊಳ್ಳಲಿ!

ಜಯಸೇನೆ—(ಪ್ರವೇಶಿಸಿ ಆವೇಗದಿಂದ) ದೇವ, ಕುಮಾರಿ ವಸುಲಕ್ಷ್ಮಿ ಚೆಂಡಿನ ಹಿಂದೆ ಓಡುತ್ತಿದ್ದಾಗ ಪಿಂಗಳ ವಾನರನನ್ನು ಕಂಡು ಬಹಳವಾಗಿ ಹೆದರಿ ಹೋಗಿದಾಳೆ. ದೇವಿಯ ತೊಡೆಯ ಮೇಲೆ ಮಲಗಿ ಈಗಲೂ ಬಿರುಗಾಳಿಗೆ ಸಿಕ್ಕಿದ ಚಿಗುರೆಲೆಯಂತೆ ನಡುಗುತ್ತಿದಾಳೆ. ಸ್ವಲ್ಪವಾದರೂ ಆಕೆಯ ಪ್ರಕೃತಿ ಉತ್ತಮಗೊಂಡಿಲ್ಲ.

ರಾಜ—ಕಷ್ಟ, ಕಷ್ಟ. ಬಾಲ್ಯದಲ್ಲಿ ಮಕ್ಕಳಿಗೆ ಕಾತರ ಸಹಜ.

ಇರಾವತಿ—(ಅತಿ ವೇಗದಿಂದ) ಆರ್ಯಪುತ್ರ, ಅವಳನ್ನು ಸಮಾಧಾನಪಡಿಸಲು ಬೇಗ ನಡೆ. ಮಗುವಿಗೆ ಭಯವಿಕಾರ ಹೆಚ್ಚದಿರಲಿ.

ರಾಜ—ಇದೊ! ಹೋಗಿ ಅವಳನ್ನು ಎಚ್ಚರಗೊಳಿಸುವೆನು. (ಬೇಗನೆ ತೆರಳುವನು.)

ವಿದೂಷಕ—(ತನಗೆ ತಾನೆ) ಭಲೆ, ಪಿಂಗಳವಾನರ, ಭಲೆ! ಸಂಕಟ ಸಮಯದಲ್ಲಿ ಸ್ವಪಕ್ಷವನ್ನು ಚೆನ್ನಾಗಿ ರಕ್ಷಿಸಿದೆ.

(ರಾಜ, ವಿದೂಷಕ, ಇರಾವತಿ, ನಿಪುಣಿಕೆ, ಚೇಟಿ ಎಲ್ಲರೂ ತೆರಳುವರು.)

ಮಾಳವಿಕೆ—ಸಖಿ, ದೇವಿಯನ್ನು ನೆನೆದು ನನ್ನ ಹೃದಯ ತಲ್ಲಣಿಸುತ್ತಿದೆ. ಇನ್ನೂ ಏನೇನನ್ನು ಅನುಭವಿಸಬೇಕೋ ಕಾಣೆ.

(ತೆರೆಯ ಹಿಂದೆ)

ಆಶ್ಚರ್ಯ, ಆಶ್ಚರ್ಯ! ದೋಹದ ಮಾಡಿ ಇನ್ನೂ ಐದು ದಿನಗಳಾಗಿಲ್ಲ. ಆಗಲೇ ಸ್ವರ್ಣಾಶೋಕ ಮೊಗ್ಗುಗಳಿಂದ ತುಂಬಿಹೋಗಿದೆ. ಈ ಸಂಗತಿಯನ್ನು ದೇವಿಯವರಿಗೆ ಅರಿಕೆಮಾಡುವೆನು.

(ಇಬ್ಬರೂ ಕೇಳಿ ಸಂತೋಷಪಡುವರು.)

ಬಕುಳಾವಳಿಕೆ—ಸಮಾಧಾನವನ್ನು ತಂದುಕೊ, ಪ್ರಿಯ ಸಖಿ. ದೇವಿ ಕೊಟ್ಟ ಮಾತಿಗೆ ತಪ್ಪುವಂಥವಳಲ್ಲ.

ಮಾಳವಿಕೆ—ಹಾಗಾದರೆ ಪ್ರಮದವನಪಾಲಿಕೆಯ ಹಿಂದೆಯೇ ಹೋಗೋಣ.

ಬಕುಳಾವಳಿಕೆ—ಆಗಲಿ. ಹಾಗೆಯೇ ಮಾಡೋಣ.

(ತೆರಳುವರು.)

## ನಾಲ್ಕನೆಯ ಅಂಕ ಮುಗಿದುದು



# ಐದನೆಯ ಅಂಕ

(ಬಳಿಕ ಮಧುಕರಿಕೆ ಎಂಬ ಹೆಸರಿನ ಉದ್ಯಾನಪಾಲಿಕೆ ಬರುವಳು.)

ಮಧುಕರಿಕೆ—ನಾನು ಸ್ವರ್ಣಾಶೋಕಕ್ಕೆ ಸಮ್ಮಾರ್ಜನ, ರಂಗವಲ್ಲಿ ಮೊದಲಾದ ಅಲಂಕಾರಗಳನ್ನು ಮಾಡಿಸಿ ವೇದಿಕೆಯನ್ನು ರಚಿಸಿಯಾಯಿತು. ಅಪ್ಪಣೆಯನ್ನು ನೆರವೇರಿಸಿರುವೆನೆಂದು ದೇವಿಗೆ ಅರಿಕೆ ಮಾಡುವೆನು. (ಮುಂಬರಿಯುವಳು.) ಆಹಾ! ಇದೀಗ ಮಾಳವಿಕೆಯ ವಿಷಯದಲ್ಲಿ ದೈವವು ದಯೆದೋರಿತು. ಹೇಗೆಂದರೆ, ಆಕೆಯ ವಿಷಯದಲ್ಲಿ ಅಷ್ಟೊಂದು ಕೋಪಗೊಂಡಿದ್ದ ದೇವಿ ಇದೀಗ ಅಶೋಕ ಹೂ ಬಿಟ್ಟಿರುವುದನ್ನು ಕೇಳಿ ಪ್ರಸನ್ನಮುಖಿಯಾಗಿರುವಳು. ದೇವಿ ಈಗ ಎಲ್ಲಿರಬಹುದು? (ನೋಡಿ) ದೇವಿಯ ಪರಿಚಾರಕನಾದ ಈ ಕುಬ್ಜ ಸಾರಸಕನು ಅರಗಿನ ಮುದ್ರೆ ಹಾಕಿದ ಪೆಟ್ಟಿಗೆಯನ್ನು ಕೈಯಲ್ಲಿ ಹಿಡಿದು ಅರಮನೆಯ ಅಂಗಳದಿಂದ ಈ ಕಡೆಗೇ ಬರುತ್ತಿದ್ದಾನೆ. ಇವನನ್ನು ಕೇಳುವೆನು.

(ಬಳಿಕ ಕುಬ್ಜನು ಮೇಲೆ ಹೇಳಿದ ರೀತಿಯಲ್ಲಿ ಬರುವನು.)

ಮಧುಕರಿಕೆ—(ಸಮೀಪಿಸಿ) ಸಾರಸಕ, ಎಲ್ಲಿಗೆ ಹೋಗುತ್ತಿದ್ದೀಯೆ?

ಸಾರಸಕ—ಮಧುಕರಿಕೆ, ವೇದಪಾರಂಗತರಾದ ಬ್ರಾಹ್ಮಣರಿಗೆ ನಿತ್ಯದಕ್ಷಿಣೆ ಕೊಡಬೇಕು. ಅದಕ್ಕಾಗಿ ಆರ್ಯನಾದ ಪುರೋಹಿತನಿಗೆ ಇದನ್ನು ಕೊಡಲೆಂದು ಹೋಗುತ್ತಿದೇನೆ.

ಮಧುಕರಿಕೆ— ಏತಕ್ಕಾಗಿ ಈಗ ಈ ದಕ್ಷಿಣೆ?

ಸಾರಸಕ—ಯಜ್ಞಾಶ್ವದ ರಕ್ಷಣೆಗಾಗಿ, ರಾಜಪುತ್ರನಾದ ವಸುಮಿತ್ರನನ್ನು ಸೇನಾಪತಿ ನಿಯೋಗಿಸಿರುವ ಸಂಗತಿಯನ್ನು ತಿಳಿದಂದಿನಿಂದ ದೇವಿ ಪುತ್ರನ ಆಯುಷ್ಯಾಭಿವೃದ್ಧಿಗಾಗಿ ಹದಿನೆಂಟು ಸುವರ್ಣಗಳ ನಿತ್ಯದಕ್ಷಿಣೆಯನ್ನು ದಕ್ಷಿಣಾರ್ಹರಾದ ಬ್ರಾಹ್ಮಣರಿಗೆ ಕೊಡಿಸುತ್ತಿದ್ದಾಳೆ.

ಮಧುಕರಿಕೆ—ಸರಿ, ದೇವಿ ಈಗ ಎಲ್ಲಿದ್ದಾಳೆ? ಏನು ಮಾಡುತ್ತಿದಾಳೆ?

ಸಾರಸಕ—ದೇವಿ ಮಂಗಳಗೃಹದಲ್ಲಿ ಕುಳಿತು ಸಹೋದರ ವೀರಸೇನನು ವಿದರ್ಭದೇಶದಿಂದ ಕಳಿಸಿರುವ ಲೇಖವನ್ನು ಕರಣಿಕನಿಂದ ಓದಿಸಿ ಕೇಳುತ್ತಿದಾಳೆ.

ಮಧುಕರಿಕೆ—ಮತ್ತೆ ಈ ವಿದರ್ಭರಾಜನ ವೃತ್ತಾಂತವೇನು ?

ಸಾರಸಕ—ವೀರಸೇನನ ನಾಯಕತ್ವದಲ್ಲಿ ಜೈತ್ರ ಯಾತ್ರೆ ಹೊರಟಿದ್ದ ಪ್ರಭುವಿನ ವಿಜಯ ಸೇನೆಗಳು ವಿದರ್ಭಾಧಿಪನನ್ನು ವಶಪಡಿಸಿಕೊಂಡಿವೆ. ಆತನ ದಾಯಾದಿಯಾದ ಮಾಧವಸೇನನು ಬಿಡುಗಡೆ ಹೊಂದಿದ್ದಾನೆ. ಆತನು ಅಮೂಲ್ಯ ರತ್ನಗಳನ್ನೂ ವಾಹನಾದಿಗಳನ್ನೂ ಕಳುಹಿಸಿದ್ದಾನೆ. ಅಲ್ಲದೆ ಅನೇಕ ಶಿಲ್ಪಕಾರಿಕೆಯರನ್ನೂ ಪರಿಜನರನ್ನೂ ಉಪಾಯನವಾಗಿ ಕೊಟ್ಟಿದ್ದಾನೆ. ಅವನಿಂದ ಬಂದ ದೂತನೊಬ್ಬನು ನಾಳೆಯ ದಿನ ಪ್ರಭುಗಳನ್ನು ಸಂದರ್ಶಿಸುವನು.

ಮಧುಕರಿಕೆ—ನಡೆ, ನಿನ್ನ ಕೆಲಸಕ್ಕೆ ನೀನು ಹೊರಡು. ನಾನೂ ದೇವಿಯನ್ನು ಕಾಣಲು ಹೋಗುತ್ತೇನೆ.

(ಇಬ್ಬರೂ ತೆರಳುವರು.)

## ಇದು ಪ್ರವೇಶಕ

(ಬಳಿಕ ಪ್ರತೀಹಾರಿ ಪ್ರವೇಶಿಸುವಳು.)

ಪ್ರತೀಹಾರಿ—" ಆರ್ಯಪುತ್ರನಿಗೆ ಅರಿಕೆ ಮಾಡು. ಆರ್ಯಪುತ್ರ ಸಹಿತಳಾಗಿ ಅಶೋಕ ವೃಕ್ಷದ ಪುಷ್ಪಶ್ರೀಯನ್ನು ನೋಡಬಯಸುತ್ತೇನೆ" ಎಂದು ಅಶೋಕ ಸತ್ಕಾರದಲ್ಲಿ ಆಸಕ್ತಳಾದ ದೇವಿ ನನಗೆ ಅಪ್ಪಣೆ ಮಾಡಿದಾಳೆ. ಆದುದರಿಂದ ಧರ್ಮಾಸನದಲ್ಲಿರುವ ಮಹಾರಾಜನ ಆಗಮನವನ್ನೇ ನಿರೀಕ್ಷಿಸುತ್ತಿದೇನೆ.

(ತೆರೆಯ ಹಿಂದೆ)

ಇಬ್ಬರು ವೈತಾಳಿಕರು—ಭಾಗ್ಯವಶದಿಂದ ದಂಡಪ್ರಯೋಗದಿಂದಲೇ ಶತ್ರುಶಿರಸ್ಸುಗಳನ್ನು ಮೆಟ್ಟಿ ವರ್ಧಿಸುತ್ತಿರುವ ಪ್ರಭುಗಳಿಗೆ ಜಯವಾಗಲಿ.

ಮೊದಲನೆಯವನು—

ಕೋಗಿಲೆಯು ಸವಿಯುಲಿಯೊಳೆಸೆಯುವ ಚಾರುವಿದಿಶಾತೀರದುಪವನದೆ
ತಳೆದು ರತಿಯುವು ಚೈತ್ರದಾನಂದವನು ಭೋಗಿಸು ಮನಸಿಜನ ತೆರದೆ
ಪ್ರಬಲಪಡೆಗಳ ನಿನ್ನ ವಿಜಯೋಭಂಗಳರಿಶಿರತತಿಯು ತಾಂ ಭರದೆ
ಬಗ್ಗಿಸಿರ್ಪುವು ವರದ! ವರವಾಲಾನತರುಗಳ ಬಗ್ಗಿಸುವ ತೆರದೆ. ೧

ಎರಡನೆಯವನು—

ಆ ವಿದರ್ಭಾಧಿಪರ ಗೆಲಿವಿರ್ಪರ್ವರದ್ಭುತಕಥೆಯು ವಿರಚನೆಯ
ಪಾಡುತಿರ್ದಪರಮರಸದೃಶನೆ! ವೀರಸಕ್ತರು ಸೂರಿಜನರರಿಯು!
ಪರಿಘುಸಮಭುಜಬಲದೆ ರುಕ್ಮಿಣಿದೇವಿಯನ್ನಪಹರಿಸಿದಾ ಹರಿಯು
ಮೇಣ್ ವಿದರ್ಭಾಧಿಪನ ರಾಜ್ಯಶ್ರೀಯ ಸೇಸೆಯಿನಾಂತ ತವ ಪರಿಯು. ೨

ಪ್ರತೀಹಾರಿ—ಈ ಜಯಶಬ್ದ ಸೂಚನೆಯಿಂದ ಮಹಾರಾಜನು ಇತ್ತಲೇ ಬರುತ್ತಿರುವಂತೆ ತೋರುವುದು. ನಾನು ಈತನ ದಾರಿಗೆ ಎದುರಾಗದೆ ಮೊಗಸಾಲೆಯ ಕಡೆಗೆ ಸರಿಯುವೆನು. (ಒಂದು ಬದಿಯಲ್ಲಿ ಸರಿದು ನಿಲ್ಲುವಳು.)

ರಾಜ—(ಮಿತ್ರನೊಡನೆ ಪ್ರವೇಶಿಸಿ)

ನನ್ನನೀಕಿನಿಗಾವಿದರ್ಭನು ಮಣಿದುದನು ಕೇಳ್ದರಿಯುತೆ
ಕಾಂತೆ ದುರ್ಲಭಳೆನುವುದನುಮಿಂಪಾಹ ಮತ್ತಿರದೆಣ್ಣುತೆ
ಬಿಸಿಲಿಗರಳುತೆ ಮಳೆಯು ಹೊಡೆತಕೆ ಸಿಲುಕಿದಂಬುಜದಂದದೆ
ಹರ್ಷಖೇದಂಗಳನು ನನ್ನೀ ಹೃದಯವನುಭವಿಸುತ್ತಿದೆ. ೩

ವಿದೂಷಕ—ಬಹುಬೇಗ ನೀನು ಏಕಾಂತಸುಖವನ್ನು ಹೊಂದುವೆಯೆಂದು ನನಗೆ ತೋರುತ್ತದೆ.

ರಾಜ—ಅದು ಹೇಗೆ?

ವಿದೂಷಕ—ಇಂದು ಧಾರಿಣೀದೇವಿ ಪಂಡಿತ ಕೌಶಿಕಿಗೆ, “ಭಗವತಿ, ನಿನಗೆ ಅಲಂಕಾರಕೌಶಲವೇನಾದರೂ ಇದ್ದರೆ ಮಾಳವಿಕೆಗೆ ವಿದರ್ಭವಧುವಿನ ಅಲಂಕಾರ ಮಾಡಿ ತೋರಿಸು” ಎಂದು ಹೇಳಿದ್ದಾಳೆ. ಅವಳೂ ಮಾಳವಿಕೆಗೆ ಅದೇ ರೀತಿಯಲ್ಲಿ ವಿಶೇಷಾಲಂಕಾರವನ್ನು ಮಾಡಿದ್ದಾಳೆ.

ಇದನ್ನೆಲ್ಲಾ ನೋಡಿದರೆ ನಿನ್ನ ಮನೋರಥವನ್ನು ದೇವಿ ಒಂದು ವೇಳೆ ನೆರವೇರಿಸಿದರೂ ನೆರವೇರಿಸಬಹುದು ಎನಿಸುತ್ತದೆ.

ರಾಜ—ವಯಸ್ಯ, ದೇವಿ ನನ್ನ ಅಪೇಕ್ಷೆಯನ್ನು ಅನುಸರಿಸತಕ್ಕವಳು. ಆದ್ದರಿಂದ ಈರ್ಷ್ಯೆಯನ್ನು ತೊರೆದು ಹೀಗೆ ಮಾಡಿದರೂ ಮಾಡಬಹುದು. ಅವಳ ಹಿಂದಿನ ನಡವಳಿಕೆಯಿಂದ ಇದನ್ನು ಊಹಿಸಬಹುದು.

ಪ್ರತೀಹಾರಿ—(ಸಮೀಪಿಸಿ) ಜಯವಾಗಲಿ ಮಹಾರಾಜನಿಗೆ. 'ಸ್ವರ್ಣಾಶೋಕದ ಕುಸುಮಕಾಂತಿಯನ್ನು ಆರ್ಯಪುತ್ರನು ನೋಡಿ ನನ್ನ ಪ್ರಯತ್ನವನ್ನು ಸಫಲಗೊಳಿಸಬೇಕು' ಎಂದು ದೇವಿಯವರು ಅರಿಕೆ ಮಾಡುವರು.

ರಾಜ—ದೇವಿ ಅಲ್ಲಿಯೇ ಇದಾಳೆಯಲ್ಲವೆ?

ಪ್ರತೀಹಾರಿ—ಹೌದು. ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಪಡೆದ ಸತ್ಕಾರದಿಂದ ತೃಪ್ತರಾದ ಅಂತಃಪುರದ ಸ್ತ್ರೀಯರನ್ನೆಲ್ಲ ಬೀಳ್ಕೊಟ್ಟು ದೇವಿಯವರು ಮಾಳವಿಕೆ ಮುಂತಾದ ಆಪ್ತ ಪರಿಜನರೊಡನೆ ಪ್ರಭುಗಳನ್ನು ಎದುರು ನೋಡುತ್ತಿದ್ದಾರೆ.

ರಾಜ—(ಸಂತೋಷದಿಂದ ವಿದೂಷಕನನ್ನು ನೋಡಿ) ಜಯಸೇನೆ, ಮುಂದೆ ನಡೆ.

ಪ್ರತೀಹಾರಿ—ದೇವ, ಹೀಗೆ, ಹೀಗೆ ಬಿಜಯಮಾಡಬೇಕು.

(ಎಲ್ಲರೂ ಮುಂದೆ ನಡೆಯುವರು)

ವಿದೂಷಕ—(ನೋಡಿ) ಅಯ್ಯಾ ವಯಸ್ಯ, ಈ ಪ್ರಮದವನದಲ್ಲಿ ವಸಂತದ ಉರುಬು ಸ್ವಲ್ಪಮಟ್ಟಿಗೆ ಕಳೆದಂತೆ ತೋರುತ್ತದೆ.

ರಾಜ—ನೀನು ಹೇಳಿದ್ದು ಸರಿಯೆ.

ಪಣ್ಗೊನೆಯ ಭಾರದಿಂದಿಮ್ಮಾವು ಜಗ್ಗಿರಲು
ಕುರವಕದ ಹೂವುಗಳು ಸುತ್ತಲುದುರಿರಲು
ಮಾಗುಜವ್ವನವೆಸೆಯುವೀ ವಸಂತನು ತಾನು
ಬಗೆಯನಿರದೌತ್ಸುಕ್ಯಗೊಳಿಸಿದಪನು. ೪

ವಿದೂಷಕ—(ಮುಂದೆ ನಡೆದು) ಓಹೋ, ಇದೇ ಸ್ವರ್ಣಾಶೋಕ! ಹೂವಿನ ಜೊಂಪೆಗಳಿಂದ ಅಲಂಕೃತವಾದಂತೆ ಇದೆ. ನೋಡು ಮಿತ್ರ.

ರಾಜ—ಇದು, ಹೂ ಬಿಡಲು ತಡಮಾಡಿದುದು ನ್ಯಾಯವಾಗಿಯೇ ಇದೆ.

ಏಕೆಂದರೆ ಇವರ ಶೋಭೆ ಈಗ ಅನನ್ಯ ಸಾಧಾರಣವಾಗಿದೆ. ನೋಡು—

ಮೊದಲು ಮಧುವೈಭವವವಸಾಂತೆಸೆದುಳಿದ ಸರ್ವಾಶೋಕದಲರುಗಳಂದದೆ
ಆದ ದೋಹದದಿಂದಲಹ ತಾಮೀ ಅಶೋಕದೆ ಪುದುಗಿದಂತಿದು ಮೆರೆದಿದೆ. ೫

ವಿದೂಷಕ—ಅಯ್ಯಾ, ನಿನ್ನ ಆಸೆ ಕೈಗೂಡುವಂತಿದೆ. ಏಕೆಂದರೆ ನಾವು ಸಮೀಪಿಸುತ್ತಿದ್ದರೂ ಧಾರಿಣೀದೇವಿ ಮಾಳವಿಕೆಯನ್ನು ಬಳಿಯಲ್ಲಿಯೇ ಇರಿಸಿಕೊಂಡಿದ್ದಾಳೆ.

ರಾಜ—(ಸಂತೋಷದಿಂದ) ನೋಡು ಮಿತ್ರ—

ನನ್ನಿನಿಯಳೊಡವೆರೆದು ದೇವಿ ವಿನಯದೊಳಿಂದು
ತಾನೆನ್ನನಿದಿರುಗೊಳಲೆಂದೇಳುವಂದು
ಕರದೆ ಕಮಲವ ಪಿಡಿಯದಿರುವರಸುಲಕುಮಿಯನು
ಜತೆಗೂಡಿದಿಳೆವೆಣ್ಣಿನಂತೆಸೆವಳಹುದು. ೬

(ಬಳಿಕ ಧಾರಿಣಿ, ಮಾಳವಿಕೆ, ಪರಿವ್ರಾಜಿಕೆ, ವಿಭವಕ್ಕನುಸಾರವಾಗಿ, ಪರಿವಾರದವರು ಪ್ರವೇಶಿಸುವರು.)

ಮಾಳವಿಕೆ—(ತನಗೆ ತಾನೆ) ಈ ಕೌತುಕಾಲಂಕಾರಕ್ಕೆ ಕಾರಣವನ್ನು ಬಲ್ಲೆ. ಆದರೂ ತಾವರೆ ಎಲೆಯ ಮೇಲಣ ನೀರ ಹನಿಯಂತೆ ನನ್ನ ಹೃದಯ ತಲ್ಲಣಿಸುತ್ತಿದೆ. ಎಡಗಣ್ಣಾದರೊ ಬಹುವಾಗಿ ಅದುರುತ್ತಿದೆ.

ವಿದೂಷಕ—ಅಯ್ಯಾ ಮಿತ್ರ, ಮದುವಣಗಿತ್ತಿಯ ಅಲಂಕಾರದಲ್ಲಿ ಈ ಮಾಳವಿಕೆ ವಿಶೇಷವಾಗಿ ಶೋಭಿಸುತ್ತಿದ್ದಾಳೆ.

ರಾಜ—

ನೆರೆಜೋಲದಿಹ ಬಿಳಿಯ ದುಗುಲವನು ತಳೆದಿರುವ
ಕೆಲಕೆಲವೆ ತೊಡವುಗಳಿನೆಸೆಯುತಿಹಳಿವಳು
ಮೂಡಿಬಹ ತಿಂಗಳಿನ ಕಾಂತಿಯನು ತಳೆದೆಸೆವ
ಹಿಮವಿರದ ತಾರೆಗಳ ಚೈತ್ರದಿರುಳೆನಲು. ೭

ದೇವಿ—(ಮುಂದೆ ಬಂದು) ಜಯವಾಗಲಿ ಆರ್ಯಪುತ್ರನಿಗೆ.

ವಿದೂಷಕ—ದೇವಿ, ವರ್ಧಿಸು.

ಪರಿವ್ರಾಜಿಕೆ—ದೇವ ವಿಜಯಿಸು.

ರಾಜ—ಭಗವತಿ, ವಂದಿಸುವೆನು.

ಪರಿವ್ರಾಜಿಕೆ—ಅಭಿಮತ ಸಿದ್ಧಿಸಲಿ.

ದೇವಿ—(ನಸುನಗುತ್ತ) ಆರ್ಯಪುತ್ರ, ತರುಣೀಜನ ಸಹಾಯನಾದ ನಿನಗೆ ಈ ಅಶೋಕವೃಕ್ಷವನ್ನು ಸಂಕೇತಗೃಹವನ್ನಾಗಿ ಮಾಡಿದ್ದೇನೆ.

ವಿದೂಷಕ—ವಯಸ್ಯ, ನೀನು ಆರಾಧಿತನಾದೆ.

ರಾಜ—(ಲಜ್ಜೆಯಿಂದ ಅಶೋಕ ವೃಕ್ಷದ ಕಡೆಗೆ ನಡೆಯುತ್ತ)

ಮಾಧವಶ್ರೀನಿಯೋಗವನಲ್ಲಗಳೆದು
ನಿನ್ನೊಂದು ಗೆಯ್ಮೆಗತ್ಯಾದರಂದಳೆದು
ಕುಸುಮಿಸಿರುವೀಯಸುಗೆ ತಾನರ್ಹಮಹುದು
ಪಡೆಯಲೀತೆರನಾದ ಸತ್ಕೃತಿಯನಿಂದು. ೮

ವಿದೂಷಕ—ಮಿತ್ರ, ಬಾ, ನಿರ್ಭೀತನಾಗಿ ಈ ಯೌವನವತಿಯನ್ನು ನೋಡು.

ದೇವಿ—ಯಾರನ್ನು ?

ವಿದೂಷಕ—ಸ್ವರ್ಣಾಶೋಕದ ಪುಷ್ಪಶ್ರೀಯನ್ನು !

(ಎಲ್ಲರೂ ಕುಳಿತುಕೊಳ್ಳುವರು)

ರಾಜ—(ಮಾಳವಿಕೆಯನ್ನು ನೋಡಿ, ತನಗೆ ತಾನೆ) ಹಾ ! ಕಷ್ಟ, ಹತ್ತಿರವೇ ಇದ್ದೂ ಇಂದು ನನಗೆ ಅಗಲಿಕೆಯೊದಗಿದೆ.

ನಾ ರಥಾಂಗದೊಲಿಹೆನು ಕಾದಲೆ ಚಕ್ರವಾಕಿಯೊಲಿರುವಳು
ನಮ್ಮ ಮಿಲಕನುಜ್ಞೆಯೀಯದ ದೇವಿ ರಜನಿವೊಲಿರುವಳು. ೯

ಕಂಚುಕಿ—(ಪ್ರವೇಶಿಸಿ) ಜಯವಾಗಲಿ ಪ್ರಭುವಿಗೆ. "ಆ ವಿದರ್ಭರಾಜನು ಕಳುಹಿಸಿದ ಉಪಾಯನದಲ್ಲಿ ಇಬ್ಬರು ಕಲಾವಿದೆಯರು ಇದ್ದಾರೆ. ಅವರು ಮಾರ್ಗಾಯಾಸದಿಂದ ಬಳಲಿದ್ದರಿಂದ ಆಗ ಸನ್ನಿಧಿಗೆ ಕರೆತರಲಾಗಲಿಲ್ಲ. ಈಗ ಪ್ರಭುಸಂದರ್ಶನಕ್ಕೆ ಯೋಗ್ಯರಾಗಿದ್ದಾರೆ. ಈ ಸಂದರ್ಭದಲ್ಲಿ ಏನು ಮಾಡಬೇಕೆಂಬುದನ್ನು ಮಹಾಪ್ರಭುಗಳು ಅಪ್ಪಣೆ ಕೊಡಿಸಬೇಕು" ಎಂದು ಅಮಾತ್ಯನು ಅರಿಕೆಮಾಡುತ್ತಾನೆ.

ರಾಜ—ಅವರನ್ನು ಬರಮಾಡು.

ಕಂಚುಕಿ—ಅಪ್ಪಣೆ. (ತೆರಳಿ ಶಿಲ್ಪಜ್ಞರೊಡನೆ ಮತ್ತೆ ಬಂದು) ಪೂಜ್ಯೆಯರಿಬ್ಬರೂ ಹೀಗೆ, ಹೀಗೆ ದಯಮಾಡಿಸಬೇಕು.

ಜ್ಯೋತ್ಸ್ನಿಕೆ—(ಮರೆಯಲ್ಲಿ) ರಜನಿಕೆ, ಹಿಂದೆಂದೂ ಪರಿಚಯವಿಲ್ಲದಿದ್ದರೂ ಈ ರಾಜನ ಅರಮನೆಯನ್ನು ಪ್ರವೇಶಿಸುತ್ತಿರುವ ನನ್ನ ಮನಸ್ಸು ಪ್ರಸನ್ನವಾಗುತ್ತಿದೆ.

ರಜನಿಕೆ—ಜ್ಯೋತ್ಸ್ನಿಕೆ, ನನಗೂ ಹಾಗೆಯೇ ಇರುವುದು. ಬರಲಿರುವುದು ಸುಖವೋ ದುಃಖವೋ ಅದನ್ನು ಹೃದಯಸ್ಥಿತಿಯು ಸೂಚಿಸುತ್ತದೆ ಎಂದು ನಾಣ್ನುಡಿಯೇ ಇದೆಯಲ್ಲವೆ ?

ಜ್ಯೋತ್ಸ್ನಿಕೆ—ಅದೀಗ ನಿಜವಾಗಲಿ.

ಕಂಚುಕಿ—ಇದೋ ಪ್ರಭು ದೇವಿಯೊಡನಿದ್ದಾನೆ. ಬಳಿಸಾರಿ.

(ಇಬ್ಬರೂ ಬಳಿ ಸಾರುವರು. ಮಾಳವಿಕೆ, ಪರಿವ್ರಾಜಿಕೆಯರು ಅವರಿಬ್ಬರನ್ನೂ ನೋಡಿ ಒಬ್ಬರನ್ನೊಬ್ಬರು ನೋಡಿಕೊಳ್ಳುವರು.)

ಇಬ್ಬರೂ—(ನಮಸ್ಕರಿಸಿ) ಜಯವಾಗಲಿ ಪ್ರಭುವಿಗೆ, ಜಯವಾಗಲಿ ದೇವಿಯವರಿಗೆ.

ರಾಜ—ಕುಳಿತುಕೊಳ್ಳಿ.

(ಇಬ್ಬರೂ ಕುಳಿತುಕೊಳ್ಳುವರು.)

ರಾಜ—ನೀವು ಯಾವ ಕಲೆಯಲ್ಲಿ ಶಿಕ್ಷಿತರಾಗಿರುವಿರಿ ?

ಇಬ್ಬರೂ—ನಮಗೆ ಸಂಗೀತದಲ್ಲಿ ಕೌಶಲವುಂಟು.

ರಾಜ—ದೇವಿ, ಇವರಿಬ್ಬರಲ್ಲಿ ಒಬ್ಬಳನ್ನು ನೀನು ಪರಿಗ್ರಹಿಸು.

ದೇವಿ—ಮಾಳವಿಕೆ, ಇಲ್ಲಿ ನೋಡು. ಇವರಲ್ಲಿ ನೀನು ಯಾರನ್ನು ಸಂಗೀತ ಸಹಾಯಿನಿಯನ್ನಾಗಿರಿಸಿಕೊಳ್ಳಲು ಒಪ್ಪುವೆ ?

ಇಬ್ಬರೂ—(ಮಾಳವಿಕೆಯನ್ನು ನೋಡಿ) ಆಹಾ! ರಾಜಕುಮಾರಿ! (ನಮಸ್ಕರಿಸಿ)ರಾಜಕುಮಾರಿಗೆ ಜಯವಾಗಲಿ. (ಇಬ್ಬರೂ ಕಂಬನಿಗರೆಯುವರು)

(ಎಲ್ಲರೂ ಆಶ್ಚರ್ಯದಿಂದ ನೋಡುವರು.)

ರಾಜ—ಈ ತರುಣಿ ಯಾರು ? ನೀವು ಯಾರು ?

ಜ್ಯೋತ್ಸ್ನಿಕೆ—ಪ್ರಭು, ಈಕೆ ನಮ್ಮ ರಾಜಪುತ್ರಿ.

ರಾಜ—ಹೇಗೆ ?

ಇಬ್ಬರೂ—ಒಡೆಯರು ಕೇಳಬೇಕು. ಸ್ವಾಮಿಯು ವಿಜಯಸೇನೆ ವಿದರ್ಭ ರಾಜನನ್ನು ವಶಮಾಡಿಕೊಂಡಿತಲ್ಲವೆ ? ಆಗ ಸೆರೆಯಿಂದ ಬಿಡುಗಡೆ ಯಾದ ಕುಮಾರ ಮಾಧವಸೇನನ ಚಿಕ್ಕತಂಗಿಯಾದ ಮಾಳವಿಕೆ ಈಕೆ.

ದೇವಿ—ಏನು, ಈಕೆ ರಾಜಪುತ್ರಿಯೆ ? ಚಂದನವನ್ನು ಪಾದುಕೆಯಂತೆ ಬಳಸಿ ಕೀಳು ಮಾಡಿದೆ.

ರಾಜ—ಅಂತಹ ಈಕೆ ಹೀಗಾದುದೇಕೆ ?

ಮಾಳವಿಕೆ—(ನಿಟ್ಟುಸಿರು ಬಿಟ್ಟು) ವಿಧಿಯ ನಿಯೋಗದಿಂದ !

ರಜನಿಕೆ—ಪ್ರಭುಗಳು ಕೇಳಬೇಕು. ನಮ್ಮ ಮಹಾರಾಜ ಕುಮಾರ ಮಾಧವ ಸೇನನನ್ನು ದಾಯಾದಿಗಳು ಹಿಡಿದರಷ್ಟೆ. ಆತನ ಅಮಾತ್ಯನಾದ ಆರ್ಯ ಸುಮತಿ ನಮ್ಮಂತಹ ಪರಿಜನವನ್ನು ಬಿಟ್ಟು ಈಕೆಯನ್ನು ಮಾತ್ರ ರಹಸ್ಯವಾಗಿ ಕರೆದುಕೊಂಡು ಹೋದನು.

ರಾಜ—ಇದನ್ನು ನಾವು ಮೊದಲೇ ಕೇಳಿ ಬಲ್ಲೆವು. ಆಮೇಲಾಮೇಲೆ !

ಇಬ್ಬರೂ—ಆಮೇಲಿನ ಸಂಗತಿ ನಮಗೆ ತಿಳಿಯದು.

ಪರಿವ್ರಾಜಿಕೆ—ಆಮೇಲಿನ ವೃತ್ತಾಂತವನ್ನು ಮಂದಭಾಗ್ಯಳಾದ ನಾನು ತಿಳಿಸುತ್ತೇನೆ.

ಇಬ್ಬರೂ—ರಾಜಪುತ್ರಿ, ಕೌಶಿಕಿಯ ಧ್ವನಿಯಂತೆ ಕೇಳಿ ಬರುತ್ತಿದೆ. ಹೌದೆ?

ಮಾಳವಿಕೆ—ಹೌದು.

ಇಬ್ಬರೂ—ಯತಿವೇಷದಲ್ಲಿರುವುದರಿಂದ ಆರ್ಯ ಕೌಶಿಕಿಯೆಂದು ತಿಳಿಯದೆ ಹೋದೆವು. ಭಗವತಿ, ನಮಸ್ಕರಿಸುವೆವು.

ಪರಿವ್ರಾಜಿಕೆ—ನಿಮಗೆ ಮಂಗಳವಾಗಲಿ.

ರಾಜ—ಏನು, ಇವರು ನಿನಗೆ ಆಪ್ತರೆ ?

ಪರಿವ್ರಾಜಿಕೆ—ಹೌದು.

ವಿದೂಷಕ—ಪೂಜ್ಯಳೆ, ಇವಳ ಸಂಬಂಧವಾದ ಉಳಿದ ಕಥೆಯನ್ನು ಸಂಪೂರ್ಣವಾಗಿ ತಿಳಿಸು.

ಪರಿವ್ರಾಜಿಕೆ—(ದುಗುಡದಿಂದ) ಹಾಗಾದರೆ ಕೇಳಿ. ಮಾಧವಸೇನನ ಸಚಿವನಾದ ಆ ಸುಮತಿ ನನಗೆ ಅಣ್ಣನಾಗಬೇಕು.

ರಾಜ—ಹಾಗೇನು ? ಆಮೇಲಾಮೇಲೆ ?

ಪರಿವ್ರಾಜಿಕೆ—ಹಾಗೆ ಸಂಕಷ್ಟದಲ್ಲಿ ಸಿಕ್ಕಿದ ಮಾಧವಸೇನನು ನನ್ನೊಡನೆ ಈಕೆಯನ್ನು ಕರೆದುಕೊಂಡು ನಿನ್ನ ಸಂಬಂಧವನ್ನು ಬೆಳೆಸುವ ಸಲುವಾಗಿ ವಿದಿಶಾನಗರಕ್ಕೆ ಬರುತ್ತಿದ್ದ ಒಂದು ವರ್ತಕರ ಗುಂಪನ್ನು ಸೇರಿಕೊಂಡನು.

ರಾಜ—ಆಮೇಲೆ ?

ಪರಿವ್ರಾಜಿಕೆ—ಆಮೇಲೆ—

ಮಂಡಿವರೆಗಿಳಿದಿರುವ ನವಿಲುಗರಿಮುಡಿಯುವರು
ಬತ್ತಳಿಕೆಪಟ್ಟಿ ಹಾಯ್ದು ಸೆಯುವೆದೆಯುವರು
ದಾಳಿಕಾರರು ಚೋರರೊಡನೆ ಬಂದೆರಗಿದರು
ಕೂಗುತ್ತಲಸದಳರು ಕೋದಂಡಧರರು. ೧೦

(ಮಾಳವಿಕೆ ಭಯವನ್ನು ನಟಿಸುವಳು)

ವಿದೂಷಕ—ಪೂಜ್ಯಳೆ, ಭಯಪಡಬೇಡ. ನಡೆದು ಹೋದ ಸಂಗತಿಯನ್ನಲ್ಲವೆ ಈಕೆ ಹೇಳುತ್ತಿರುವುದು.

ರಾಜ—ಆಮೇಲೇನಾಯಿತು ?

ಪರಿವ್ರಾಜಿಕೆ—ಆಮೇಲೆ ವರ್ತಕವೃಂದದವರು ಕರೆತಂದ ಸೇನೆಗೂ ಆ ಚೋರರಿಗೂ ಒಂದು ಮುಹೂರ್ತಕಾಲ ಯುದ್ಧವಾಯಿತು. ಕೊನೆಗೆ ಚೋರ ಸೇನೆಯೇ ಗೆದ್ದಿತು.

ರಾಜ—ಭಗವತಿ, ಮುಂದೆ ಕೇಳಬೇಕಾಗಿರುವುದು ಇನ್ನೂ ದಾರುಣವಾಗಿದೆಯಲ್ಲವೆ ?

ಪರಿವ್ರಾಜಿಕೆ—ಆಗ ಆ ನಮ್ಮ ಅಣ್ಣ—

ದೊರೆಯು ಸಂತೊಲಿದವನು ತನ್ನಿನಿಯ ಜೀವವನು
ತೆತ್ತವನು ತೀರಿಸಿದನಾ ಋಣವನು
ಹೆರರಿನಪಮಾನವಹುದೆಂದಳುಕಿದೀಕೆಯನು
ದುಷ್ಟರಿಂದುಳುಹಲೆಂದೆನ್ನಣ್ಣನು. ೧೧

ಜ್ಯೋತ್ಸ್ನಿಕೆ—ಅಯ್ಯೋ, ಸುಮತಿ ಮಡಿದನೆ?

ರಜನಿಕೆ—ಆದುದರಿಂದಲೇ ಅಲ್ಲವೆ ರಾಜಕುಮಾರಿ ಇಂತಹ ಕಷ್ಟಕ್ಕೆ ಒಳಗಾಮದು.

(ಪರಿವ್ರಾಜಿಕೆ ಕಂಬನಿ ಮಿಡಿವಳು)

ರಾಜ—ಪೂಜ್ಯಳೆ, ದೇಹಧಾರಿಗಳಿಗೆಲ್ಲ ಲೋಕಯಾತ್ರೆ ಹೀಗೆಯೇ. ಸ್ವಾಮಿಯ ಅನ್ನದ ಋಣವನ್ನು ಸಫಲಗೊಳಿಸಿದ ಆ ಮಹಾನುಭಾವನ ವಿಷಯದಲ್ಲಿ ಶೋಕಪಡಬೇಕಾದುದಿಲ್ಲ. ಆಮೇಲೆ?

ಪರಿವ್ರಾಜಿಕೆ—ಆಗ ನಾನು ಮೂರ್ಛೆಹೋದೆ. ಮರಳಿ ಎಚ್ಚರಗೊಂಡಾಗ ಈ ಮಾಳವಿಕೆ ಎಲ್ಲಿಯೂ ಕಾಣಿಸಲಿಲ್ಲ.

ರಾಜ—ಪೂಜ್ಯಳು ತುಂಬ ಕಷ್ಟವನ್ನು ಅನುಭವಿಸಿರಬೇಕು.

ಪರಿವ್ರಾಜಿಕೆ—ಆಮೇಲೆ ಅಣ್ಣನ ದೇಹಕ್ಕೆ ಅಗ್ನಿಸಂಸ್ಕಾರ ಮಾಡಿ ಮುಗಿಸಿದೆ. ನನ್ನ ವೈಧವ್ಯ ಪುನಃ ಹೊಸದಾದಂತೆ ದುಃಖವನ್ನು ಅನುಭವಿಸುತ್ತ ನಿನ್ನ ದೇಶ ಸೇರಿ ಈ ಕಾವಿ ಧರಿಸಿದೆ.

ರಾಜ—ಯುಕ್ತ. ಇದೇ ಸಜ್ಜನರ ಮಾರ್ಗ. ಆಮೇಲಾಮೇಲೆ?

ಪರಿವ್ರಾಜಿಕೆ—ಈಕೆ ಅಡವಿಯಿಂದ ವೀರಸೇನನನ್ನೂ ವೀರಸೇನನಿಂದ ದೇವಿಯನ್ನೂ ಸೇರಿದಳು. ಅಂತಃಪುರದಲ್ಲಿ ನಾನು ಈಕೆಯನ್ನು ನೋಡಿದೆ. ಇಲ್ಲಿಗೆ ಈ ಕಥೆ ಮುಗಿಯಿತು.

ಮಾಳವಿಕೆ—(ತನಗೆ ತಾನೆ) ಈಗ ಮಹಾರಾಜನು ಏನು ಹೇಳುವನೊ?

ರಾಜ—ಆಹ! ವಿಪತ್ತಿಗೆ ಗುರಿಯಾದವರಿಗೆ ತಿರಸ್ಕಾರ ತಪ್ಪಿದ್ದಲ್ಲ.

ದೇವಿಯೆ ನಿಪರ್ಹತೆಯನಾಂತಳನು ನಡೆಸಿದೆವು ತೊತ್ತಿನವೊಲುಂತೆ
ಬಹುಬೆಲೆಯ ರೇಸಿಮೆಯ ವಸನವನು ಬಳಸುವೊಲು ಮೀಹದುಡೆಯುಂತೆ. ೧೨

ದೇವಿ—ಪೂಜ್ಯಳೆ, ಮಾಳವಿಕೆಯ ಅಭಿಜಾತ್ಯವನ್ನು ತಿಳಿದಿದ್ದರೂ ನನಗೆ ಹೇಳದೇ ಇದ್ದುದು ಸರಿಯೆ?

ಪರಿವ್ರಾಜಿಕೆ—ಶಾಂತಂ ಪಾಪಂ! ಶಾಂತಂ ಪಾಪಂ! ಕಾರಣವಿದ್ದುದರಿಂದಲೇ ನಾನು ಹೇಳಲಿಲ್ಲ.

ದೇವಿ—ಏನು ಕಾರಣ?

ರಾಜ—ಹೇಳಬಹುದಾಗಿದ್ದರೆ ಹೇಳು.

ಪರಿವ್ರಾಜಿಕೆ—ಕೇಳಿ : ಈಕೆಯ ತಂದೆ ಜೀವಿಸಿದ್ದ ಕಾಲದಲ್ಲಿ ದೇವಯಾತ್ರೆಗಾಗಿ ಬಂದ ವಾಕ್ಸಿದ್ಧಿಯುಳ್ಳ ಒಬ್ಬ ಸಾಧು "ಈಕೆ ಒಂದು ವರ್ಷ ಕಾಲಮಾತ್ರ ಪರತಂತ್ರವನ್ನನುಭವಿಸಿ ಆಮೇಲೆ ಸದೃಶನಾದ ಪತಿಯನ್ನು ಹೊಂದುವಳು" ಎಂದು ನನ್ನ ಸಮ್ಮುಖದಲ್ಲಿಯೇ ನುಡಿದಿದ್ದನು. ಅದು ಅವಶ್ಯವಾಗಿ ಸಂಭವಿಸುವುದೆಂದು ನಂಬಿದ್ದ ನಾನು ಈಕೆಯ ಪರತಂತ್ರ ನಿನ್ನ ಪಾದಶುಶ್ರೂಷೆಯಲ್ಲಿ ಪರಿಣಮಿಸಿದುದನ್ನು ಕಂಡು ಕಾಲನಿರೀಕ್ಷೆ ಮಾಡುತ್ತ ಸುಮ್ಮನಿದ್ದೆ. ನಾನು ಸುಮ್ಮನಿದ್ದುದೇ ಸರಿಯೆಂದು ನನಗೆ ತೋರುತ್ತಿದೆ.

ರಾಜ—ಸರಿ, ಸರಿ. ಹಾಗೆ ನಿರೀಕ್ಷಿಸಿ ಸುಮ್ಮನಿದ್ದುದೇ ಸಾಧು.

ಕಂಚುಕಿ—(ಪ್ರವೇಶಿಸಿ) ದೇವ, ಬೇರೆ ಒಂದು ಸಂಗತಿಯ ಪ್ರಸ್ತಾಪ ಬಂದುದರಿಂದ ಅಮಾತ್ಯನು ಅರಿಕೆಮಾಡೆಂದು ಹೇಳಿಕಳುಹಿದ ಸಂಗತಿಯೊಂದು ಬಿಟ್ಟುಹೋಯಿತು. ಅಮಾತ್ಯನು ಹೀಗೆ ಅರಿಕೆ ಮಾಡುವನು: "ವಿದರ್ಭರಾಜನ ವಿಷಯದಲ್ಲಿ ನಾವು ಏನು ಮಾಡಬೇಕೆಂಬುದನ್ನು ಯೋಚಿಸಿಯಾಯಿತು. ಸ್ವಾಮಿಯ ಅಭಿಪ್ರಾಯವೇನೆಂಬುದನ್ನು ಕೇಳಬಯಸುತ್ತೇನೆ" ಎಂದು.

ರಾಜ—ಮೌದ್ಗಲ್ಯ, ಅಣ್ಣತಮ್ಮಂದಿರಾದ ಆ ಯಜ್ಞಸೇನ ಮಾಧವಸೇನರಿಬ್ಬರಿಗೂ ಎರಡು ಬೇರೆ ಬೇರೆ ರಾಜ್ಯಗಳನ್ನು ಸ್ಥಾಪಿಸಿಕೊಡಲು ಅಪೇಕ್ಷಿಸುತ್ತೇನೆ.

ಆಳಲಾ ಸೋದರರು ವರದೆಯ ತೆಂಕು ಬಡಗಣ ತಡಿಗಳೊಡೆತನವಾನುತೆ
ಪಗಲಿರುಳ್ಗಳ ಪಸುಗೆಗೊಂಡಿನಶಶಿಗಳಿರ್ವರು ಆಳ್ವ ಪರಿಯನು ಹೋಲುತೆ ೧೩

ಕಂಚುಕಿ—ಪ್ರಭು, ಅಮಾತ್ಯಪರಿಷತ್ತಿಗೆ ಹಾಗೆಯೆ ತಿಳಿಸುವೆನು.

(ರಾಜನು ಕೈಸನ್ನೆಯಿಂದ ಅನುಮತಿ ಈಯುವನು. ಕಂಚುಕಿ ತೆರಳುವಳು.)

ಜ್ಯೋತ್ಸ್ನಿಕೆ—(ಮರೆಯಲ್ಲಿ) ರಾಜಪುತ್ರಿ, ಭಾಗ್ಯವಶದಿಂದ ಮಹಾರಾಜನು ರಾಜಪುತ್ರನನ್ನು ಅರ್ಧರಾಜ್ಯಕ್ಕೆ ಒಡೆಯನನ್ನಾಗಿ ಮಾಡುವನು.

ಮಾಳವಿಕೆ—ಸದ್ಯಕ್ಕೆ ಜೀವದಿಂದ ಉಳಿದುಕೊಂಡನಲ್ಲ; ಅದೇ ಒಂದು ದೊಡ್ಡ ಸಂಗತಿ.

ಕಂಚುಕಿ—(ಪ್ರವೇಶಿಸಿ) ವಿಜಯವಾಗಲಿ ಮಹಾರಾಜನಿಗೆ. ಅಮಾತ್ಯನು ಬಿನ್ನವಿಸುವನು. ಪ್ರಭು ನಿರ್ಣಯ ಬಹಳ ಶುಭಕರವಾಗಿದೆ. ಮಂತ್ರಿ ಪರಿಷತ್ತು ಹಾಗೆಯೇ ಅಭಿಪ್ರಾಯಪಟ್ಟಿದೆ. ಏಕೆಂದರೆ—

ಪಸುಗೆಗೊಂಡ್ಯೆಸಿರಿಯನಿರ್ವರುಂ ಧರಿಯಿಸುತೆ
ರಥಕೆ ಸಾರಥಿ ಬಿಗಿದ ತುರಗಯುಗದಂತೆ
ತಾಮಿರ್ವರಿರ್ದಪರು ನರಪ ನಿನ್ನಂಕೆಯೊಳು
ತಂತಮ್ಮ ಹಗೆತನವನುಳಿದು ನೇಹದೊಳು. ೧೪

ರಾಜ—"ಹಾಗೆಯೇ ಮಾಡತಕ್ಕದ್ದೆಂದು ಸೇನಾಧಿಪತಿ ವೀರಸೇನನಿಗೆ ಲೇಖನವನ್ನು ಬರೆಯಬೇಕು" ಎಂದು ಮಂತ್ರಿಪರಿಷತ್ತಿಗೆ ಹೇಳು.

ಕಂಚುಕಿ—ಮಹಾರಾಜನ ಅಪ್ಪಣೆ. (ತೆರಳಿ, ಪತ್ರಸಹಿತವಾಗಿ ಉಪಾಯನ ದೊಡನೆ ಮರಳಿ) ಪ್ರಭುವಿನ ಅಪ್ಪಣೆಯನ್ನು ನಡೆಸಿದೆನು. ಇದೊ, ಈಗ ತಾನೆ ಸೇನಾಪತಿ ಪುಷ್ಪಮಿತ್ರ ಮಹಾರಾಜರಿಂದ ಉಪಾಯನ ಸಹಿತವಾದ ಈ ಲೇಖನ ಬಂದಿದೆ. ಪರಾಂಬರಿಸಬೇಕು.

(ರಾಜನು ಎದ್ದು ಉಪಾಯನ ಸಹಿತವಾಗಿ ಆ ಲೇಖನವನ್ನು ಗೌರವ ಸಹಿತವಾಗಿ ತೆಗೆದುಕೊಂಡು, ಉಪಾಯನವನ್ನು ಪರಿಜನರ ಕೈಗೆ ಕೊಟ್ಟು ಪತ್ರವನ್ನು ತೆರೆಯುವನು.)

ದೇವಿ—ಆಹಾ! ನನ್ನ ಮನಸ್ಸೆಲ್ಲ ಆ ಪತ್ರದ ಕಡೆಗೇ ಇರುವುದು. ಗುರು ಜನರ ಕುಶಲವಾರ್ತೆಯಾದ ಬಳಿಕ ಕುಮಾರ ವಸುಮಿತ್ರನ ವೃತ್ತಾಂತವನ್ನು ಕೇಳುವೆನಷ್ಟೆ. ಸೇನಾಪತಿಗಳು ಕುಮಾರನನ್ನು ಗುರುತರವಾದ ಕಾರ್ಯಕ್ಕೆ ನೇಮಿಸಿದ್ದರಲ್ಲವೆ?

ರಾಜ—(ಕುಳಿತು ಲೇಖನವನ್ನು ಓದುವನು) "ಸ್ವಸ್ತಿ. ಯಜ್ಞವಾಟದಿಂದ ಸೇನಾಪತಿಯಾದ ಪುಷ್ಪಮಿತ್ರನು ವಿದಿಶೆಯಲ್ಲಿರುವ ಆಯುಷ್ಮಂತ ನಾದ ಕುಮಾರ ಅಗ್ನಿಮಿತ್ರನಿಗೆ ಪ್ರೀತಿಯಿಂದ ಆಲಿಂಗಿಸಿ ತಿಳಿಸುವು ದೇನೆಂದರೆ—ರಾಜಸೂಯಾಧ್ವರದೀಕ್ಷೆಯನ್ನು ತಳೆದ ನಾನು ರಾಜ

ಪುತ್ರಶತಪರಿವಾರದೊಡನೆ ವಸುಮಿತ್ರನನ್ನು ರಕ್ಷಕನನ್ನಾಗಿರಿಸಿ, ಯಜ್ಞತುರಗವನ್ನು ನಿರರ್ಗಳವಾಗಿ ಸಂಚರಿಸಬಿಟ್ಟು ಒಂದು ವರ್ಷದ ತರುವಾಯ ಮತ್ತೆ ನನ್ನ ಬಳಿಗೆ ಬರತಕ್ಕದ್ದೆಂದು ನಿಯಮಿಸಿದ್ದೆನಷ್ಟೆ. ಅದು ಸಿಂಧುವಿನ ದಕ್ಷಿಣ ತೀರದಲ್ಲಿ ಸಂಚರಿಸುತ್ತಿರಲು ಯವನ ರಾವುತರ ಪಡೆ ಅದನ್ನು ಹಿಡಿಯಿತು. ಬಳಿಕ ಎರಡು ಪಡೆಯವರಿಗೂ ದೊಡ್ಡ ಕಾಳಗ ನಡೆಯಿತು.

(ಧಾರಿಣೀದೇವಿ ವಿಷಾದವನ್ನು ತೋರ್ಪಡಿಸುವಳು.)

ರಾಜ—ಇದೇನು ಹೀಗಾಯಿತು! (ಉಳಿದುದನ್ನು ಓದುವನು.)

ಆ ಬಳಿಕ ಹಗೆಗಳನು ಸೋಲಿಸುತೆ ಬಿಲ್ಗಾರ ವಸುಮಿತ್ರನು
ಬಲವಂತದಿಂದವರು ಒಯ್ದ ಹಯರತ್ನವನು ಮರಳಿಸಿದನು. ೧೫

ದೇವಿ—ಇದನ್ನು ಕೇಳಿದ ಮೇಲೆ ನನ್ನ ಮನಸ್ಸಿಗೆ ನೆಮ್ಮದಿಯಾಯಿತು.

ರಾಜ—(ಮತ್ತೆ ಲೇಖನದ ಉಳಿದ ಭಾಗವನ್ನು ಓದುವನು.) ಈಗ ನಾನು ಅಂಶುಮಂತನಿಂದ ಸಗರನು ಹೇಗೋ ಹಾಗೆ ನನ್ನ ಪೌತ್ರನು ರಕ್ಷಿಸಿ ಹಿಂದಕ್ಕೆ ತಂದ ಅಶ್ವದಿಂದ ರಾಜಸೂಯಯಾಗವನ್ನು ಮಾಡುತ್ತಿದ್ದೇನೆ. ಆದ್ದರಿಂದ ನೀನು ತಡಮಾಡದೆ ಮನಸ್ಸಿನಲ್ಲಿ ರೋಷ ತಾಳದೆ ವಧೂಜನಸಮೇತನಾಗಿ ಯಜ್ಞಸೇವೆಗೆ ಬರಬೇಕು."

ರಾಜ—ಅನುಗೃಹೀತನಾದೆ.

ಪರಿವ್ರಾಜಿಕೆ—ಪುತ್ರವಿಜಯದಿಂದ ವರ್ಧಿಸುತ್ತಿರುವ ದಂಪತಿಗಳನ್ನು ನಾನು ಅಭಿವಂದಿಸುತ್ತೇನೆ. (ದೇವಿಯನ್ನು ನೋಡಿ)

ಪತಿಯಿಂದೆ ನೀಂ ವೀರಸತಿಯರೊಳು ಮೂರ್ಧನ್ಯಳಾದೆ
ಸುತನಿಂದೆ ಮೇಣ್ ವೀರಸೂಶಬ್ದಕಿಂದರ್ಹಳಾದೆ. ೧೬

ವಿದೂಷಕ—ಪೂಜ್ಯಳೆ, ನಿನ್ನ ಪುತ್ರನು ತಂದೆಯಂತೆಯೇ ವೀರನಾದುದಕ್ಕೆ ನನಗೆ ತುಂಬ ಸಂತೋಷವಾಗಿದೆ.

ಪರಿವ್ರಾಜಿಕೆ—ಕಲಭ ಸಲಗವನ್ನೇ ಅನುಕರಿಸಿತಲ್ಲವೆ?

ಬರಿದೆ ಈ ವೀರವಿಜೃಂಭಣಗಳಿಂದಾಗದಾಶ್ಚರ್ಯ ಪಾರಯ್ಯಲು
ವಾರಿಶೋಷಣದನಲಗೌರ್ವನೊಲು ದುರ್ಧರ್ಷನುನ್ನತನು ಜನಕನಿರಲು. ೧೭

ರಾಜ—ಮೌದ್ಗಲ್ಯ, ಯಜ್ಞಸೇನನ ಭಾವಮೈದುನನನ್ನೂ ಬಂಧನದಲ್ಲಿರುವ ಉಳಿದೆಲ್ಲರನ್ನೂ ಬಿಡುಗಡೆ ಮಾಡತಕ್ಕದ್ದು.

ಕಂಚುಕಿ—ಸ್ವಾಮಿಯ ಅಪ್ಪಣೆ (ತೆರಳುವನು.)

ದೇವಿ—ಜಯಸೇನೆ, ಹೋಗು. ಇರಾವತಿಯೇ ಮೊದಲಾದ ಅಂತಃಪುರದ ಸ್ತ್ರೀಯರಿಗೆ ಪುತ್ರನ ವಿಜಯವೃತ್ತಾಂತವನ್ನು ತಿಳಿಸು.

ಪ್ರತೀಹಾರಿ—ಅಪ್ಪಣೆ.

ದೇವಿ—ಸ್ವಲ್ಪ, ಹೀಗೆ ಬಾ.

ಪ್ರತೀಹಾರಿ—(ತಿರುಗಿ) ಇದೋ ಬಂದೆ.

ದೇವಿ—(ಮರೆಯಲ್ಲಿ) ಅಶೋಕದೋಹದಕ್ಕೆ ನಿಯೋಗಿಸಿದಾಗ ನಾನು ಮಾಳವಿಕೆಗೆ ಕೊಟ್ಟಿದ್ದ ವಚನವನ್ನೂ, ಈಕೆಯ ಕುಲಸಂಪದವನ್ನೂ ಅರಿಕೆಮಾಡಿ ನನ್ನನ್ನು ಸತ್ಯಚ್ಯುತಳನ್ನಾಗಿ ಮಾಡಬೇಡ ಎಂದು ಇರಾವತಿಯನ್ನು ಸಮಾಧಾನಗೊಳಿಸು.

ಪ್ರತೀಹಾರಿ—ದೇವಿಯ ಅಪ್ಪಣೆ (ತೆರಳಿ, ಮರಳಿ ಬಂದು) ದೇವಿ, ಪುತ್ರವಿಜಯ ಸಂತುಷ್ಟರಾದ ಅಂತಃಪುರದವರ ಬಹುಮಾನಾಭರಣಗಳಿಗೆ ನಾನು ರತ್ನಮಂಜೂಷೆಯಾದೆ.

ದೇವಿ—ಇದರಲ್ಲಿ ಆಶ್ಚರ್ಯವೇನು ? ಈ ಅಭ್ಯುದಯ ನನಗೂ ಅವರಿಗೂ ಸಮಾನವಾದುದೇ.

ಪ್ರತೀಹಾರಿ—(ಮರೆಯಲ್ಲಿ) ದೇವಿ, " ಸಮರ್ಥಳಾದ ನಿನಗೆ ಇದು ತಕ್ಕುದೇ ಆಗಿದೆ. ಮೊದಲು ಸಂಕಲ್ಪ ಮಾಡಿ ಆಡಿದ ಮಾತನ್ನು ಆಮೇಲೆ ತಪ್ಪುವುದು ಯೋಗ್ಯವಲ್ಲ " ಎಂದು ಇರಾವತಿ ವಿಜ್ಞಾಪಿಸಿದಳು.

ದೇವಿ—ಪೂಜ್ಯಳೆ, ಆರ್ಯ ಸುಮತಿಯ ಪ್ರಥಮ ಸಂಕಲ್ಪದಂತೆ ಮಾಳವಿಕೆಯನ್ನು ನಿನ್ನ ಅನುಜ್ಞೆಯಿಂದ ಆರ್ಯಪುತ್ರನಿಗೆ ಮದುವೆ ಮಾಡಿಕೊಡಬಯಸುತ್ತೇನೆ.

ಪರಿವ್ರಾಜಿಕೆ—ಮಹಾರಾಜನೆ, ಈಗಲೂ ಈಕೆಗೆ ನೀನೇ ಒಡತಿ.

ದೇವಿ—(ಮಾಳವಿಕೆಯ ಕೈಹಿಡಿದು) ಪ್ರಿಯವಾರ್ತೆಯನ್ನು ಹೇಳಿದುದಕ್ಕೆ

ಅನುರೂಪವಾದ ಈ ಪಾರಿತೋಷಕವನ್ನು ಆರ್ಯಪುತ್ರನು ಪ್ರತಿಗ್ರಹಿಸಬೇಕು.

(ರಾಜನು ಲಜ್ಜೆಯಿಂದ ಸುಮ್ಮನಿರುವನು.)

ದೇವಿ—(ನಸುನಕ್ಕು) ಏನು, ಆರ್ಯಪುತ್ರನು ನನ್ನನ್ನು ಅವಮಾನಗೊಳಿಸುವನೆ ?

ವಿದೂಷಕ—ದೇವಿ, ಹೊಸದರಲ್ಲಿ ವರರಿಗೆಲ್ಲ ನಾಚಿಕೆ ಲೋಕ ವ್ಯವಹಾರವೇ.

(ರಾಜನು ವಿದೂಷಕನ ಕಡೆ ನೋಡುವನು.)

ವಿದೂಷಕ—ಅಥವಾ ಮಹಾರಾಣಿಯವರೇ ದೇವಿ ಎಂದು ಹೆಸರಿಟ್ಟು ಈ ಮಾಳವಿಕೆಯನ್ನು ಕೊಟ್ಟರೆ ಮಹಾರಾಜನು ಪ್ರತಿಗ್ರಹಿಸುತ್ತಾನೆ.

ದೇವಿ—ಈ ರಾಜಕುಮಾರಿಗೆ ಹುಟ್ಟಿನಿಂದಲೇ ದೇವಿ ಎಂಬ ಹೆಸರು ದೊರಕಿದೆ. ಪುನರುಕ್ತಿ ಏಕೆ ?

ಪರಿವ್ರಾಜಿಕೆ—ಹಾಗಲ್ಲ ;

ಗಣಿಯಿಂದಲೊಗೆದರೂ ಕಲ್ಯಾಣಿ ಕೇಳು
ಸಂಸ್ಕಾರ ಮಣಿಜಾತಿಗೊದವಿ ಬರದಿರಲು
ಬೆರೆಯುವರ್ಹತೆಯಿರದು ಜಾತರೂಪದೊಳು. ೧೮

ದೇವಿ—ಭಗವತಿ, ಮನ್ನಿಸು. ಅಭ್ಯುದಯ ಪ್ರಸ್ತಾಪದಲ್ಲಿ ಇದನ್ನು ತಿಳಿಯದೆ ಹೋದೆ. ಜಯಸೇನೆ, ಹೋಗು. ಧೌತಕೌಶೇಯವೊಂದನ್ನು ಬೇಗ ತೆಗೆದುಕೊಂಡು ಬಾ.

ಪ್ರತೀಹಾರಿ—ಅಪ್ಪಣೆ. (ತೆರಳಿ ಕೌಶೇಯದೊಡನೆ ಮರಳಿ) ದೇವಿ, ಇದೊ!

ದೇವಿ—(ಮಾಳವಿಕೆಗೆ ಹೊದಿಸಿ) ಆರ್ಯಪುತ್ರ, ಈಗ ಇವಳನ್ನು ಸ್ವೀಕರಿಸು.

ರಾಜ—ದೇವಿ, ನಿನ್ನ ಶಾಸನಕ್ಕೆ ನಾನು ನಿರುತ್ತರನು.

(ಮಾಳವಿಕೆಯ ಕೈಹಿಡಿಯುವನು)

ಪರಿವ್ರಾಜಿಕೆ—ಆಹಾ, ಪ್ರತಿಗೃಹೀತೆಯಾದಳು !

ವಿದೂಷಕ—ಆಹಾ, ದೇವಿ ಎಷ್ಟು ಅನುಕೂಲಳು !

(ದೇವಿ ಪರಿಜನರನ್ನು ನೋಡುವಳು)

ಪ್ರತೀಹಾರಿ—(ಮಾಳವಿಕೆಯ ಬಳಿಗೆ ನಡೆದು) ದೇವಿಗೆ ಜಯವಾಗಲಿ!

(ದೇವಿ ಪರಿವ್ರಾಜಿಕೆಯನ್ನು ನೋಡುವಳು.)

ಪರಿವ್ರಾಜಿಕೆ—ಇದು ನಿನ್ನಲ್ಲಿ ವಿಚಿತ್ರವೆನಿಸದು. ಏಕೆಂದರೆ—

ಸಾಧ್ವಿಯರು ಭರ್ತೃವಾತ್ಸಲ್ಯದಿಂದನಿಯರನು
ಸೇವಿಪರು ತಂದಾದರೂ ಸವತಿಯರನು
ನದಿಯೊಂದು ಜೊತೆಗೊಂಡು ನೂರಾರು ತೊರೆಗಳನು
ನಡೆದೊಲಿದು ಸೇವಿಪೊಲು ತನ್ನಂಬುಧಿಯನು. ೧೯

ನಿಪುಣಿಕೆ—(ಪ್ರವೇಶಿಸಿ) ಜಯವಾಗಲಿ ಮಹಾರಾಜನಿಗೆ. "ಆಗ ನಾನು ಮರ್ಯಾದೆ ಮೀರಿ ಮಾಡಿದ ಅಪರಾಧದಿಂದ ಈಗ ಒಡೆಯನಿಗೆ ಅನುಕೂಲವೇ ಆಗಿದೆ. ಆದ್ದರಿಂದ ಈಗ ಪೂರ್ಣ ಮನೋರಥನಾದ ಮಹಾರಾಜನು ನನ್ನನ್ನು ಪ್ರಸಾದ ಮಾತ್ರದಿಂದ ಆದರಿಸಬೇಕು" ಎಂದು ಇರಾವತಿ ಅರಿಕೆ ಮಾಡುತ್ತಾಳೆ.

ದೇವಿ—ನಿಪುಣಿಕೆ, ಆರ್ಯಪುತ್ರನು ಅವಶ್ಯವಾಗಿಯೂ ಅವಳ ಸಂದೇಶವನ್ನು ಗೌರವಿಸುವನು.

ನಿಪುಣಿಕೆ—ಅಪ್ಪಣೆ, ಅನುಗೃಹೀತೆಯಾದೆ. (ತೆರಳುವಳು.)

ಪರಿವ್ರಾಜಿಕೆ—ದೇವ, ನಿನ್ನ ಅಪ್ಪಣೆಯಾದರೆ ಯೋಗ್ಯವಾದ ತಮ್ಮ ಸಂಬಂಧದಿಂದ ಚರಿತಾರ್ಥನಾದ ಮಾಧವಸೇನನನ್ನು ಗೌರವಿಸಲು ನಾನು ಹೋಗಿಬರುತ್ತೇನೆ.

ದೇವಿ—ಪೂಜ್ಯಳೆ, ನನ್ನನ್ನು ಬಿಟ್ಟು ಹೋಗುವುದು ನಿನಗೆ ತರವಲ್ಲ.

ರಾಜ—ಪೂಜ್ಯಳೆ, ನಾನು ಬರೆಯಿಸುವ ಲೇಖನದಲ್ಲಿಯೇ ಆ ಪೂಜ್ಯನಿಗೆ ನಿನ್ನ ಮನ್ನಣೆಯ ಮಾತುಗಳನ್ನೂ ಸೇರಿಸುತ್ತೇನೆ.

ಪರಿವ್ರಾಜಿಕೆ—ನಿಮ್ಮಿಬ್ಬರ ವಿಶ್ವಾಸಕ್ಕೆ ನಾನು ಪರವಶಳಾಗಿದೇನೆ.

ದೇವಿ—ಆರ್ಯಪುತ್ರ, ನಿನಗೆ ಮತ್ತಾವ ಪ್ರಿಯವನ್ನುಂಟುಮಾಡಲಿ? ಅಪ್ಪಣೆಯಾಗಬೇಕು.

ರಾಜ—ಇದಕ್ಕಿಂತಲೂ ಪ್ರಿಯವಾದುದು ಇನ್ನೇನು ತಾನೆ ಇದ್ದೀತು. ಆದರೂ ಇದಿಷ್ಟು ನಡೆಯಲಿ :

(ಭರತವಾಕ್ಯ)

ನಿತ್ಯವೂ ನೀಂ ಪ್ರಸನ್ನತೆಯ ತಳೆದಿರ್ಪುದೆಲೆ ದೇವಿ
ಪ್ರತಿಪಕ್ಷಕಾರಣದಿನಿನಿತನೆಯೆ ನಾಂ ಬೇಳ್ಪೆನೋವಿ
ಈತ್ಯಾದಿಬಾಧೆಗಳು ಅಳಿಯಲೆಸುವೀಯೊಂದು ಹರಕೆ
ಅಗ್ನಿಮಿತ್ರನು ನೃಪನು ಸಲೆ ಪೊರೆವ ಜನರಿಗಿನ್ನೇಕೆ? ೨೦

(ಎಲ್ಲರೂ ತೆರಳುವರು.)

## ಐದನೆಯ ಅಂಕ ಮುಗಿದುದು

---

# ಕನ್ನಡ ಪದ್ಯಗಳ ಸಂಸ್ಕೃತ ಮೂಲ

## I

೧

ಏಕೈಶ್ವರ್ಯೇ ಸ್ಥಿತೋऽಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ
ಕಾಂತಾಸಂಮಿಶ್ರದೇಹೋऽಪ್ಯವಿಷಯಮನಸಾಂ ಯಃ ಪರಸ್ತಾದ್ಯತೀ
ನಾಮ್ ।
ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ
ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ ॥

೨

ಪುರಾಣಮಿತ್ಯೇವ ನ ಸಾಧು ಸರ್ವಂ ನ ಚಾಪಿ ಕಾವ್ಯಂ ನವಮಿತ್ಯವದ್ಯಮ್
ಸಂತಃ ಪರೀಕ್ಷ್ಯಾನ್ಯತರದ್ಭಜನ್ತೇ ಮೂಢಃ ಪರಪ್ರತ್ಯಯನೇಯಬುದ್ಧಿಃ ॥

೩

ಶಿರಸಾ ಪ್ರಥಮಗೃಹೀತಾಮಾಜ್ಞಾಮಿಚ್ಛಾಮಿ ಪರಿಷದಃ ಕರ್ತುಮ್
ದೇವ್ಯಾ ಇವ ಧಾರಿಣ್ಯಾಃ ಸೇವಾದಕ್ಷಃ ಪರಿಜನೋऽಯಮ್ ॥

೪

ದೇವಾನಾಮಿದಮಾಮನನ್ತಿ ಮುನಯಃ ಕಾನ್ತಂ ಕ್ರತುಂ ಚಾಕ್ಷುಷಂ
ರುದ್ರೇಣೇದಮುಮಾಕೃತವ್ಯತಿಕರೇ ಸ್ವಾಂಗೇ ವಿಭಕ್ತಂ ದ್ವಿಧಾ ।
ತ್ರೈಗುಣ್ಯೋದ್ಭವಮತ್ರ ಲೋಕಚರಿತಂ ನಾನಾರಸಂ ದೃಶ್ಯತೇ
ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಮ್ ॥

೫

ಯದ್ಯತ್ಪ್ರಯೋಗವಿಷಯೇ ಭಾವಿಕಮುಪದಿಶ್ಯತೇ ಮಯಾ ತಸ್ಯೈ
ತತ್ತದ್ವಿಶೇಷಕರಣಾತ್ಪ್ರತ್ಯುಪದಿಶತೀವ ಮೇ ಬಾಲಾ ॥

೬

ಪಾತ್ರವಿಶೇಷೇ ನ್ಯಸ್ತಂ ಗುಣಾನ್ತರಂ ವ್ರಜತಿ ಶಿಲ್ಪಮಾಧಾತುಃ
ಜಲಮಿವ ಸಮುದ್ರಶುಕ್ತೌ ಮುಕ್ತಾಫಲತಾಂ ಪಯೋದಸ್ಯ ||

೭

ಮೌರ್ಯಸಚಿವಂ ವಿಮುಂಚತಿ ಯದಿ ಪೂಜ್ಯಃ ಸಂಯತಂ ಮಮ
ಶ್ಯಾಲಮ್ |
ಮೋಕ್ತಾ ಮಾಧವಸೇನಂ ತತೋಽಹಮಪಿ ಬಂಧನಾತ್ ಸದ್ಯಃ ||

೮

ಅಚಿರಾಧಿಷ್ಠಿತರಾಜ್ಯಃ ಶತ್ರುಃ ಪ್ರಕೃತಿಷ್ವರೂಢಮೂಲತ್ವಾತ್ |
ನವಸಂರೋಹಣ ಶಿಥಿಲಸ್ತರುರಿವ ಸುಕರಃ ಸಮುದ್ಧರ್ತುಮ್ ||

೯

ಅರ್ಥಂ ಸಪ್ರತಿಬಂಧಂ ಪ್ರಭುರಧಿಗಂತುಂ ಸಹಾಯವಾನೇವ |
ದೃಶ್ಯಂ ತಮಸಿ ನ ಪಶ್ಯತಿ ದೀಪೇನ ವಿನಾ ಸಚಕ್ಷುರಪಿ ||

೧೦

ಉಭಾವಭಿನಯಾಚಾರ್ಯೌ ಪರಸ್ಪರಜಯೋದ್ಯತೌ |
ತ್ವಾಂ ದ್ರಷ್ಟುಮಿಚ್ಛತಃ ಸಾಕ್ಷಾದ್ಭಾವಾವಿವ ಶರೀರಿಣೌ ||

೧೧

ಸ ಚ ನ ಪರಿಚಿತೋ ನ ಚಾಪ್ಯರಮ್ಯ
ಶ್ಚಕಿತಮುಪೈಮಿ ತಥಾಪಿ ಪಾರ್ಶ್ವಮಸ್ಯ
ಸಲಿಲನಿಧಿರಿವ ಪ್ರತಿಕ್ಷಣಂ ಮೇ
ಭವತಿ ಸ ಏವ ನವೋ ನವೋಽಯಮಕ್ಷ್ಣೋಃ ||

೧೨

ದ್ವಾರೇನಿಯುಕ್ತಪುರುಷಾನುಮತಪ್ರವೇಶಃ
ಸಿಂಹಾಸನಾನ್ತಿಕಚರೇಣ ಸಹೋಪಸರ್ಪನ್ |
ತೇಜೋಭಿರಸ್ಯ ವಿನಿವರ್ತಿತದೃಷ್ಟಿಪಾತೈ-
ರ್ವಾಕ್ಯಾದೃತೇ ಪುನರಿವ ಪ್ರತಿವಾರಿತೋಽಸ್ಮಿ ||

೧೩

ಅತಿಮಾತ್ರಭಾಸುರತ್ವಂ ಪುಷ್ಯತಿ ಭಾನೋಃ ಪರಿಗ್ರಹಾದನಲಃ |
ಅಧಿಗಚ್ಛತಿ ಮಹಿಮಾನಂ ಚಂದ್ರೋಽಪಿ ನಿಶಾಪರಿಗೃಹೀತಃ ||

೧೪

ಮಂಗಲಾಲಂಕೃತಾ ಭಾತಿ ಕೌಶಿಕ್ಯಾ ಯತಿವೇಷಯಾ |
ತ್ರಯೀ ವಿಗ್ರಹವತ್ಯೇವ ಸಮಮಧ್ಯಾತ್ಮವಿದ್ಯಯಾ ||

೧೫

ಮಹಾಸಾರಪ್ರಸವಯೋಃ ಸದೃಶಕ್ಷಮಯೋರ್ದ್ವಯೋಃ |
ಧಾರಿಣೀಭೂತಧಾರಿಣ್ಯೋರ್ಭವ ಭರ್ತಾ ಶರಚ್ಛತಮ್ ||

೧೬

ಶ್ಲಿಷ್ಟಾ ಕ್ರಿಯಾ ಕಸ್ಯಚಿದಾತ್ಮಸಂಸ್ಥಾ
ಸಂಕ್ರಾನ್ತಿರನ್ಯಸ್ಯ ವಿಶೇಷಯುಕ್ತಾ |
ಯಸ್ಯೋಭಯಂ ಸಾಧು ಸ ಶಿಕ್ಷಕಾಣಾಂ
ಧುರಿ ಪ್ರತಿಷ್ಠಾಪಯಿತವ್ಯ ಏವ ||

೧೭

ಲಬ್ಧಾಸ್ಪದೋಽಸ್ಮೀತಿ ವಿವಾದಭೀರೋ-
ಸ್ತಿತಿಕ್ಷಮಾಣಸ್ಯ ಪರೇಣ ನಿಂದಾಮ್ |
ಯಸ್ಯಾಗಮಃ ಕೇವಲಜೀವಿಕಾಯೈ
ತಂ ಜ್ಞಾನಪಣ್ಯಂ ವಣಿಜಂ ವದನ್ತಿ ||

೧೮

ಅನಿಮಿತ್ತಮಿಂದುವದನೇ ಕಿಮತ್ರಭವತಃ ಪರಾಙ್ಮುಖೀ ಭವಸಿ |
ಪ್ರಭವನ್ತ್ಯೋಽಪಿ ಹಿ ಭರ್ತೃಷು ಕಾರಣಕೋಪಾಃ ಕುಟುಂಬಿನ್ಯಃ ||

೧೯

ವಿವಾದೇ ದರ್ಶಯಿಷ್ಯನ್ತಂ ಕ್ರಿಯಾಸಂಕ್ರಾನ್ತಿಮಾತ್ಮನಃ |
ಯದಿ ಮಾಂ ನಾನುಜಾನಾಸಿ ಪರಿತ್ಯಕ್ತೋಽಸ್ಮ್ಯಹಂ ತ್ವಯಾ ||

೨೦

ಅಲಮನ್ಯಥಾ ಗೃಹೀತ್ವಾ ನ ಖಲು ಮನಸ್ವಿನಿ ಮಯಾ ಪ್ರಯುಕ್ತಮಿದಮ್ ।
ಪ್ರಾಯಃ ಸಮಾನವಿದ್ಯಾಃ ಪರಸ್ಪರಯಶಃಪುರೋಭಾಗಾಃ ॥

೨೧

ಜೀಮೂತಸ್ತನಿತವಿಶಂಕಿಭಿರ್ಮಯೂರೈ- ।
ರುದಗ್ರೀವೈರನುರಸಿತಸ್ಯ ಪುಷ್ಕರಸ್ಯ ।
ನಿರ್ಹ್ರಾದಿನ್ಯುಪಹಿತಮಧ್ಯಮಸ್ವರೋತ್ಥಾ
ಮಾಯೂರೀ ಮದಯತಿ ಮಾರ್ಜನಾ ಮನಾಂಸಿ ॥

೨೨

ಧೈರ್ಯಾವಲಂಬಿನಮಪಿ ತ್ವರಯತಿ ಮಾಂ ಮುರಜವಾದ್ಯರಾಗೋಽ
ಯಮ್ ।

ಅವತರತಃ ಸಿದ್ಧಿಪಥಂ ಶಬ್ದಃ ಸ್ವಮನೋರಥಸ್ಯೇವ ॥

## II

೧

ನೇಪಥ್ಯಗೃಹಗತಾಯಾಶ್ಚಕ್ಷುರ್ದರ್ಶನ ಸಮುತ್ಸುಕಂ ತಸ್ಯಾಃ ।
ಸಂಹರ್ತುಮಧೀರತಯಾ ವ್ಯವಸಿತಮಿವ ಮೇ ತಿರಸ್ಕರಣೀಮ್ ॥

೨

ಚಿತ್ರಗತಾಯಾಮಸ್ಯಾಂ ಕಾನ್ತಿವಿಸಂವಾದಶಂಕಿ ಮೇ ಹೃದಯಮ್ ।
ಸಂಪ್ರತಿ ಶಿಥಿಲಸಮಾಧಿಂ ಮನ್ಯೇ ಯೇನೇಯಮಾಲಿಖಿತಾ ॥

೩

ದೀರ್ಘಾಕ್ಷಂ ಶರದಿಂದುಕಾಂತಿ ವದನಂ ಬಾಹೂ ನತಾವಂಸಯೋಃ
ಸಂಕ್ಷಿಪ್ತಂ ನಿಬಿಡೋನ್ನತಸ್ತನಮುರಃ ಪಾರ್ಶ್ವೇ ಪ್ರಮೃಷ್ಟೇ ಇವ ।
ಮಧ್ಯಃ ಪಾಣಿಮಿತೋಽಮಿತಂ ಚ ಜಘನಂ ಪಾದಾವರಾಲಾಂಗುಲೀ
ಛಂದೋ ನರ್ತಯಿತುರ್ಯಥೈವ ಮನಸಿ ಶ್ಲಿಷ್ಟಂ ತಥಾಸ್ಯಾಃ ವಪುಃ ॥

೪

ದುರ್ಲಭಃ ಪ್ರಿಯೋ ಮೇ ತಸ್ಮಿನ್ ಭವ ಹೃದಯ ನಿರಾಶಮ್
ಅಹೋ ಅಪಾಂಗಕೋ ಮೇ ಪ್ರಸ್ಫುರತಿ ಕಿಮಪಿ ವಾಮಕಃ ।
ಏಷ ಸ ಚಿರದೃಷ್ಟಃ ಕಥಮುಪನೇತವ್ಯೋ
ನಾಥ ಮಾಂ ಪರಾಧೀನಾಂ ತ್ವಯಿ ಗಣಯ ಸತೃಷ್ಣಾಮ್ ॥

೫

ಜನಮಿಮಮನುರಕ್ತಂ ವಿದ್ಧಿ ನಾಥೇತಿ ಗೇಯೇ
ವಚನಮಭಿನಯನ್ತ್ಯಾ ಸ್ವಾಂಗನಿರ್ದೇಶಪೂರ್ವಮ್ ।
ಪ್ರಣಯಗತಿಮದೃಷ್ಟ್ವಾ ಧಾರಿಣೀಸನ್ನಿಕರ್ಷಾ
ದಹಮಿವ ಸುಕುಮಾರಪ್ರಾರ್ಥನಾವ್ಯಾಜಮುಕ್ತಃ ॥

೬

ವಾಮಂ ಸಂಧಿಸ್ತಿಮಿತವಲಯಂ ನ್ಯಸ್ಯ ಹಸ್ತಂ ನಿತಂಬೇ
ಕೃತ್ವಾ ಶ್ಯಾಮಾವಿಟಪಸದೃಶಂ ಸ್ರಸ್ತಮುಕ್ತಂ ದ್ವಿತೀಯಮ್ ।
ಪಾದಾಂಗುಷ್ಠಾ ಲುಲಿತಕುಸುಮೇ ಕುಟ್ಟಿಮೇ ಪಾತಿತಾಕ್ಷಮ್
ನೃತ್ತಾದಸ್ಯಾಃ ಸ್ಥಿತಮತಿತರಾಂ ಕಾಂತಮೃಜ್ವಾಯತಾರ್ಧಮ್ ॥

೭

ಮಂದೋಽಪ್ಯಮಂದತಾಮೇತಿ ಸಂಸರ್ಗೇಣ ವಿಪಶ್ಚಿತಃ ।
ಪಂಕಚ್ಛಿದಃ ಫಲಸ್ಯೇವ ನಿಕಷೇಣಾವಿಲಂ ಪಯಃ ॥

೮

ಅಂಗೈರಂತರ್ನಿಹಿತವಚನೈಃ ಸೂಚಿತಃ ಸಮ್ಯಗರ್ಥಃ
ಪಾದನ್ಯಾಸೋ ಲಯಮನುಗತಸ್ತನ್ಮಯತ್ವಂ ರಸೇಷು ।
ಶಾಖಾಯೋನಿರ್ಮೃದುರಭಿನಯಸ್ತದ್ವಿಕಲ್ಪಾನುವೃತ್ತೌ
ಭಾವೋ ಭಾವಂ ನುದತಿ ವಿಷಯಾದ್ರಾಗಬಂಧಃ ಸ ಏವ ॥

೯

ಉಪದೇಶಂ ವಿದುಃ ಶುದ್ಧಂ ಸಂತಸ್ತಮುಪದೇಶಿನಃ ।
ಶ್ಯಾಮಾಯತೇ ನ ಯುಷ್ಮಾಸು ಯಃ ಕಾಂಚನಮಿವಾಗ್ನಿಷು ॥

೧೦

ಸ್ಮಯಮಾನಮಾಯತಾಕ್ಷ್ಯಾಃ ಕಿಂಚಿದಭಿವ್ಯಕ್ತದಶನಶೋಭಿ ಮುಖಮ್ ।
ಅಸಮಗ್ರಲಕ್ಷ್ಯಕೇಸರಮುಚ್ಛ್ವಸದಿವ ಪಂಕಜಂ ದೃಷ್ಟಮ್ ॥

೧೧

ಭಾಗ್ಯಾಸ್ತಮಯಮಿವಾಕ್ಷ್ಣೋರ್ಹೃದಯಸ್ಯ ಮಹೋತ್ಸವಾವಸಾನಮಿವ ।
ದ್ವಾರಪಿಧಾನಮಿವ ಧೃತೇರ್ಮನ್ಯೇ ತಸ್ಯಾಸ್ತಿರಸ್ಕರಣಮ್ ॥

೧೨

ಪತ್ರಚ್ಛಾಯಾಸು ಹಂಸಾ ಮುಕುಲಿತನಯನಾ ದೀರ್ಘಿಕಾಪದ್ಮಿನೀನಾಂ
ಸೌಧಾನ್ಯತ್ಯರ್ಥತಾಪಾದ್ವಲಭಿಪರಿಚಯದ್ವೇಷಿಪಾರಾವತಾನಿ ।
ಬಿಂದೂತ್ಕ್ಷೇಪಾನ್ಪಿಪಾಸುಃ ಪರಿಸರತಿ ಶಿಖೀ ಭ್ರಾನ್ತಿಮದ್ವಾರಿಯಂತ್ರಂ
ಸರ್ವೈರುಸ್ರೈಃ ಸಮಗ್ರಸ್ತ್ವಮಿವ ನೃಪಗುಣೈರ್ದೀಪ್ಯತೇ ಸಪ್ತಸಪ್ತಿಃ ॥

೧೩

ಅವ್ಯಾಜಸುಂದರೀಂ ತಾಂ ವಿಜ್ಞಾನೇನ ಲಲಿತೇನ ಯೋಜಯತಾ ।
ಪರಿಕಲ್ಪಿತೋ ವಿಧಾತ್ರಾ ಬಾಣಃ ಕಾಮಸ್ಯ ವಿಷದಿಗ್ಧಃ ॥

೧೪

ಸರ್ವಾಂತಃಪುರವನಿತಾವ್ಯಾಪಾರಂ ಪ್ರತಿ ನಿವೃತ್ತಹೃದಯಸ್ಯ ।
ಸಾ ವಾಮಲೋಚನಾ ಮೇ ಸ್ನೇಹಸ್ಯೈಕಾಯಿನೀಭೂತಾ ॥

## III

೧

ಶರೀರಂ ಕ್ಷಾಮಂ ಸ್ಯಾದಸತಿ ದಯಿತಾಲಿಂಗನಸುಖೇ
ಭವೇತ್ಸಾಸ್ರಂ ಚಕ್ಷುಃ ಕ್ಷಣಮಪಿ ನ ನ ಸಾ ದೃಶ್ಯತ ಇತಿ ।
ತಯಾ ಸಾರಂಗಾಕ್ಷ್ಯಾ ತ್ವಮಸಿ ನ ಕದಾಚಿದ್ವಿರಹಿತಂ
ಪ್ರಸಕ್ತೇ ನಿರ್ವಾಣೇ ಹೃದಯ ಪರಿತಾಪಂ ವಹಸಿ ಕಿಮ್ ॥

೨

ಕ್ವ ರುಜಾ ಹೃದಯಪ್ರಮಾಥಿನೀ ಕ್ವ ಚ ತೇ ವಿಶ್ವಸನೀಯಮಾಯುಧಂ ।
ಮೃದು ತೀಕ್ಷ್ಣತರಂ ಯದುಚ್ಯತೇ ತದಿದಂ ಮನ್ಮಥ ದೃಶ್ಯತೇ ತ್ವಯಿ ॥

೩

ಉಚಿತಃ ಪ್ರಣಯೋ ವರಂ ವಿಹಸ್ತುಂ ಬಹವಃ ಖಂಡನಹೇತವೋ ಹಿ
ದೃಷ್ಟಾಃ ।
ಉಪಚಾರವಿಧಿರ್ಮನಸ್ವಿನೀನಾಂ ನ ತು ಪೂರ್ವಾಭ್ಯಧಿಕೋಽಪಿ ಭಾವ
ಶೂನ್ಯಃ ॥

೪

ಆಮತ್ತಾನಾಂ ಶ್ರವಣಸುಭಗೈಃ ಕೂಜಿತೈಃ ಕೋಕಿಲಾನಾಂ
ಸಾನುಕ್ರೋಶಂ ಮನಸಿಜರುಜಃ ಸಹ್ಯತಾಂ ಪೃಚ್ಛತೇವ ।
ಅಂಕೇ ಚೂತಪ್ರಸವಸುರಭಿರ್ದಕ್ಷಿಣೋ ಮಾರುತೋ ಮೇ
ಸಾಂದ್ರಸ್ಪರ್ಶಃ ಕರತಲ ಇವ ವ್ಯಾಪೃತೋ ಮಾಧವೇನ ॥

೫

ರಕ್ತಾಶೋಕರುಚಾ ವಿಶೇಷಿತಗುಣೋ ಬಿಂಬಾಧರಾಲಕ್ತಕಃ
ಪ್ರತ್ಯಾಖ್ಯಾತವಿಶೇಷಕಂ ಕುರಬಕಂ ಶ್ಯಾಮಾವದಾತಾರುಣಮ್ ।
ಆಕ್ರಾನ್ತಾ ತಿಲಕಕ್ರಿಯಾಪಿ ತಿಲಕೈರ್ಲಗ್ನದ್ವಿರೇಫಾಂಜನೈಃ
ಸಾವಜ್ಞೇವ ಮುಖಪ್ರಸಾಧನವಿಧೌ ಶ್ರೀರ್ಮಾಧವೀ ಯೋಷಿತಾಂ ॥

೬

ತ್ವದುಪಲಭ್ಯ ಸಮೀಪಗತಾಂ ಪ್ರಿಯಾಂ ಹೃದಯಮುಚ್ಛ್ವಸಿತಂ ಮಮ
ವಿಕ್ಲವಂ ।
ತರುವೃತಾಂ ಪಥಿಕಸ್ಯ ಪಿಪಾಸತಃ ಸರಿತಮಾರಸಿತಾದಿವ ಸಾರಸಾತ್ ॥

೭

ವಿಪುಲಂ ನಿತಂಬಬಿಂಬೇ ಮಧ್ಯೇ ಕ್ಷಾಮಂ ಸಮುನ್ನತಂ ಕುಚಯೋಃ ।
ಅತ್ಯಾಯತಂ ನಯನಯೋರ್ಮಮ ಜೀವಿತಮೇತದಾಯಾತಿ ॥

೮

ಶರಕಾಂಡಪಾಂಡುಗಂಡಸ್ಥಲೇಯಮಾಭಾತಿ ಪರಿಮಿತಾಭರಣಾ ।
ಮಾಧವಪರಿಣತಪತ್ರಾ ಕತಿಪಯಕುಸುಮೇವ ಕುಂದಲತಾ ॥

೯

ಮೋಘಾ ಕುರಬಕರಜಸಾಂ ಕಿಸಲಯಪುಟಭೇದಶೀಕರಾನುಗತಃ ।
ಅನಿಮಿತ್ತೋತ್ಕಂಠಾಮಪಿ ಜನಯತಿ ಮಲಯವಾತೋಽಯಮ್ ॥

೧೦

ಔತ್ಸುಕ್ಯಹೇತುಂ ವಿವೃಣೋಷಿ ನ ತ್ವಂ ತತ್ತ್ವಾವಬೋಧೈಕರಸೋ ನ ತರ್ಕಃ ॥
ತಥಾಪಿ ರಂಭೋರು ಕರೋಮಿ ಲಕ್ಷ್ಯಮಾತ್ಮಾನಮೇಷಾಂ ಪರಿದೇವಿತಾನಾಮ್ ॥

೧೧

ಚರಣಾನ್ತನಿವೇಶಿತಾಂ ಪ್ರಿಯಾಯಾಃ ಸರಸಾಂ ಪಶ್ಯ ವಯಸ್ಯ ರಾಗರೇಖಾಮ್ ।
ಪ್ರಥಮಾಮಿವ ಪಲ್ಲವಪ್ರಸೂತಿಂ ಹರದಗ್ಧಸ್ಯ ಮನೋಭವದ್ರುಮಸ್ಯ ॥

೧೨

ನವಕಿಸಲಯರಾಗೇಣಾಗ್ರಪಾದೇನ ಬಾಲಾ
ಸ್ಫುರಿತನಖರುಚಾ ದ್ವೌ ಹನ್ತುಮರ್ಹತ್ಯನೇನ ॥
ಅಕುಸುಮಿತಮಶೋಕಂ ದೋಹದಾಪೇಕ್ಷಯಾ ವಾ
ಪ್ರಣಿಹಿತಶಿರಸಂ ವಾ ಕಾನ್ತಮಾರ್ದ್ರಾಪರಾಧಮ್ ॥

೧೩

ಆರ್ದ್ರಾಲಕ್ತಕಮಸ್ಯಾಶ್ಚರಣಂ ಮುಖಮಾರುತೇನ ವೀಜಯಿತುಂ ।
ಪ್ರತಿಪನ್ನಃ ಪ್ರಥಮತರಃ ಸಂಪ್ರತಿ ಸೇವಾವಕಾಶೋ ಮೇ ॥

೧೪

ಭಾವಜ್ಞಾನಾನಂತರಂ ಪ್ರಸ್ತುತೇನ
ಪ್ರತ್ಯಾಖ್ಯಾನೇ ದತ್ತಯುಕ್ತೋತ್ತರೇಣ ।
ವಾಕ್ಯೇನೇಯಂ ಸ್ಥಾಪಿತಾ ಸ್ವೇ ನಿದೇಶೇ
ಸ್ಥಾನೇ ಪ್ರಾಣಾಃ ಕಾಮಿನಾಂ ದೂತ್ಯಧೀನಾಃ ॥

೧೫

ಅನಾತುರೋತ್ಕಂಠಿತಯೋಃ ಪ್ರಸಿಧ್ಯತಾ
ಸಮಾಗಮೇನಾಪಿ ರತಿರ್ನ ಮಾಂ ಪ್ರತಿ |
ಪರಸ್ಪರಪ್ರಾಪ್ತಿನಿರಾಶಯೋರ್ವರಂ
ಶರೀರನಾಶೋಽಪಿ ಸಮಾನುರಾಗಯೋಃ ||

೧೬

ಆದಾಯ ಕರ್ಣಕಿಸಲಯಮಸ್ಮಾದಿಯಮತ್ರ ಚರಣಮರ್ಪಯತಿ |
ಉಭಯೋಃ ಸದೃಶವಿನಿಮಯಾದಾತ್ಮಾನಂ ವಂಚಿತಂ ಮನ್ಯೇ ||

೧೭

ಅನೇನ ತನುಮಧ್ಯಯಾ ಮುಖರನೂಪುರಾರಾವಿಣಾ
ನವಾಂಬುರುಹಕೋಮಲೇನ ಚರಣೇನ ಸಂಭಾವಿತಃ |
ಅಶೋಕ ಯದಿ ಸದ್ಯ ಏವ ಕುಸುಮೈರ್ನ ಸಂಪತ್ಸ್ಯಸೇ
ವೃಥಾ ವಹಸಿ ದೋಹದಂ ಲಲಿತಕಾಮಿಸಾಧಾರಣಮ್ ||

೧೮

ಕಿಸಲಯಮೃದೋರ್ವಿಲಾಸಿನಿ ಕಠಿನೇ ನಿಹಿತಸ್ಯ ಪಾದಪಸ್ಕಂಧೇ |
ಚರಣಸ್ಯ ನ ತೇ ಬಾಧಾ ಸಂಪ್ರತಿ ವಾಮೋರು ವಾಮಸ್ಯ ||

೧೯

ಧೃತಿಪುಷ್ಪಮಯಮಪಿ ಜನೋ ಬಧ್ನಾತಿ ನ ತಾದೃಶಂ ಚಿರಾತ್ಪ್ರಭೃತಿ |
ಸ್ಪರ್ಶಾಮೃತೇನ ಪೂರಯ ದೋಹದಮಸ್ಯಾಪ್ಯನನ್ಯರುಚೇಃ ||

೨೦

ಶಠ ಇತಿ ಮಯಿ ತಾವದಸ್ತು ತೇ ಪರಿಚಯವತ್ಯವಧೀರಣಾ ಪ್ರಿಯೇ |
ಚರಣ ಪತಿತಯಾ ನ ಚಂಡಿ ತಾಂ ವಿಸೃಜಾಸಿ ಮೇಖಲಯಾಪಿ ಯಾಚಿತಾ ||

೨೧

ಬಾಷ್ಪಾಸಾರಾ ಹೇಮಕಾಂಚೀಗುಣೇನ
ಶ್ರೋಣೀಬಿಂಬಾದವ್ಯಪೇಕ್ಷಾಚ್ಯುತೇನ |
ಚಂಡೀ ಚಂಡಂ ಹಂತುಮಭ್ಯುದ್ಯತಾ ಮಾಂ
ವಿದ್ಯುದ್ದಾಮ್ನಾ ಮೇಘರಾಜೀವ ವಿಂಧ್ಯಂ ||

೨೨

ಅಪರಾಧಿನಿ ಮಯಿ ದಂಡಂ ಸಂಹರಸಿ ಕಿಮುದ್ಯತಂ ಕುಟಿಲಕೇಶಿ ।
ವರ್ಧಯಸಿ ವಿಲಸಿತಂ ತ್ವಂ ದಾಸಜನಾಯಾತ್ರ ಕುಪ್ಯಸಿ ಚ ॥

೨೩

ಮನ್ಯೇ ಪ್ರಿಯಾಹೃತಮನಾಸ್ತಸ್ಯಾಃ ಪ್ರಣಿಪಾತಲಂಘನಂ ಸೇವಾಂ ।
ಏವಂ ಪ್ರಣಯವತೀ ಸಾ ಮಯಿ ಶಕ್ಯಮುಪೇಕ್ಷಿತುಂ ಕುಪಿತಾ ॥

# IV

೧

ತಾಮಾಶ್ರಿತ್ಯ ಶ್ರುತಿಪಥಗತಾಮಾಸ್ಥಯಾಲಬ್ಧಮೂಲಃ
ಸಂಪ್ರಾಪ್ತಾಯಾಂ ನಯನವಿಷಯಂ ರೂಢರಾಗಪ್ರವಾಲಃ ।
ಹಸ್ತಸ್ಪರ್ಶೈರ್ಮುಕುಲಿತ ಇವ ವ್ಯಕ್ತರೋಮೋದ್ಗಮಾತ್
ಕುರ್ಯಾತ್ಕಾಸ್ತಂ ಮನಸಿಜತರುರ್ಮಾಂ ರಸಜ್ಞಂ ಫಲಸ್ಯ ॥

೨

ಮಧುರರವಾ ಪರಭೃತಿಕಾ ಭ್ರಮರೀ ಚ ವಿಬುದ್ಧ ಚೂತಸಂಗಿನ್ಯೌ ।
ಕೋಟರಮಕಾಲವೃಷ್ಟ್ಯಾ ಪ್ರಬಲಪುರೋವಾತಯಾ ಗಮಿತೇ ॥

೩

ಅನುಚಿತನೂಪುರವಿರಹಂ ನಾರ್ಹಸಿ ತಪಸೀಯಪೀಠಿಕಾಲಂಬಂ ।
ಚರಣಂ ರುಜಾಪರೀತಂ ಕಲಭಾಷಿಣಿ ಮಾಂ ಚ ಪೀಡಯಿತುಂ ॥

೪

ಛೇದೋ ದಂಶಸ್ಯ ದಾಹೋ ವಾ ಕ್ಷತೇರ್ವಾ ರಕ್ತಮೋಕ್ಷಣಂ ।
ಏತಾನಿ ದಷ್ಟಮಾತ್ರಾಣಾಮಾಯುಷಃ ಪ್ರತಿಪತ್ತಯಃ ॥

೫

ಇಷ್ಟಾಧಿಗಮನಿಮಿತ್ತಂ ಪ್ರಯೋಗಮೇಕಾಂತಸಾಧುಮಪಿ ಮತ್ವಾ ।
ಸಂದಿಗ್ಧಮೇವ ಸಿದ್ಧಾ ಕಾತರಮಾಶಂಕತೇ ಚೇತಃ ॥

೬

ನ ಹಿ ಬುದ್ಧಿಗುಣೇನೈವ ಸುಹೃದಾಮರ್ಥದರ್ಶನಮ್ ।
ಕಾರ್ಯಸಿದ್ಧಿಪಥಃ ಸೂಕ್ಷ್ಮಃ ಸ್ನೇಹೇನಾಪ್ಯುಪಲಭ್ಯತೇ ॥

೭

ಸೂರ್ಯೋದಯೇ ಭವತಿ ಯಾ ಸೂರ್ಯಾಸ್ತಮಯೇ ಚ ಪುಂಡರೀಕಸ್ಯ ।
ವದನೇನ ಸುವದನಾಯಾಸ್ತೇ ಸಮವಸ್ಥೇ ಕ್ಷಣಾದೂಢೇ ॥

೮

ಕಾರ್ತ್ಸ್ನ್ಯೇನ ನಿರ್ವರ್ಣಯಿತುಂ ಚ ರೂಪಮಿಚ್ಛಂತಿ ತತ್ ಪೂರ್ವ
ಸಮಾಗತಾನಾಂ ॥
ನ ಚ ಪ್ರಿಯೇಷ್ವಾಯತಲೋಚನಾನಾಂ ಸಮಗ್ರಪಾತಾನಿ
ವಿಲೋಚನಾನಿ ॥

೯

ಭ್ರೂಭಂಗಭಿನ್ನತಿಲಕಂ ಸ್ಫುರಿತಾಧರೋಷ್ಠಂ
ಸಾಸೂಯಮಾನನಮಿತಃ ಪರಿವರ್ತಯನ್ತ್ಯಾ ॥
ಕಾಂತಾಪರಾಧಕುಪಿತೇಷ್ವನಯಾ ವಿನೇತುಃ
ಸಂದರ್ಶಿತೇವ ಲಲಿತಾಭಿನಯಸ್ಯ ಶಿಕ್ಷಾ ॥

೧೦

ಕುಪ್ಯಸಿ ಕುವಲಯನಯನೇ ಚಿತ್ರಾರ್ಪಿತಚೇಷ್ಟಯಾ ಕಿಮೇವಮಯಿ ।
ನನು ತವ ಸಾಕ್ಷಾದಯಮಹಮನನ್ಯಸಾಧಾರಣೋ ದಾಸಃ ॥

೧೧

ಪಥಿ ನಯನಯೋಃ ಸ್ಥಿತ್ವಾ ತಿರೋಭವತಿ ಕ್ಷಣಾ-
ತ್ಸರತಿ ಸಹಸಾ ಬಾಹ್ವೋರ್ಮಧ್ಯಂ ಗತಾಪಿ ಸಖೀ ತವ ।
ಮನಸಿಜರುಜಾ ಕ್ಲಿಷ್ಟಸ್ಯೈವಂ ಸಮಾಗಮಮಾಯಯಾ
ಕಥಮಿವ ಸಖೇ ವಿಸ್ರಬ್ಧಂ ಸ್ಯಾದಿಮಾಂ ಪ್ರತಿ ಮೇ ಮನಃ ॥

೧೨

ಉತ್ತರೇಣ ಕಿಮಾತ್ಮೈವ ಪಂಚಬಾಣಾಗ್ನಿಸಾಕ್ಷಿಕಂ ।
ತವ ಸಖ್ಯೈ ಮಯಾ ದತ್ತೋ ನ ಸೇವ್ಯಃ ಸೇವಿತಾ ರಹಃ ॥

೧೩

ವಿಸೃಜ ಸುಂದರಿ ಸಂಗಮಸಾಧ್ವಸಂ
ತವ ಚಿರಾತ್ಪ್ರಭೃತಿ ಪ್ರಣಯೋನ್ಮುಖೇ ।
ಪರಿಗೃಹಾಣ ಗತೇ ಸಹಕಾರತಾಂ
ತ್ವಮತಿಮುಕ್ತಲತಾಚರಿತಂ ಮಯಿ ॥

೧೪

ದಾಕ್ಷಿಣ್ಯಂ ನಾಮ ಬಿಂಬೋಷ್ಠಿ ಬೈಂಬಿಕಾನಾಂ ಕುಲವ್ರತಂ ।
ತನ್ಮೇ ದೀರ್ಘಾಕ್ಷಿ ಯೇ ಪ್ರಾಣಾಸ್ತೇ ತ್ವದಾಶಾನಿಬಂಧನಾಃ ॥

೧೫

ಹಸ್ತಂ ಕಂಪಯತೇ ರುಣದ್ಧಿ ರಶನಾವ್ಯಾಪಾರಲೋಲಾಂಗುಲೀಃ ।
ಹಸ್ತೌ ಸ್ವೌ ನಯತಿ ಸ್ತನಾವರಣತಾಮಾಲಿಂಗ್ಯಮಾನಾ ಬಲಾತ್ ।
ಪಾತುಂ ಪಕ್ಷ್ಮಲಚಕ್ಷುರುನ್ನಮಯತಃ ಸಾಚೀಕರೋತ್ಯಾನನಂ
ವ್ಯಾಜೇನಾಪ್ಯಭಿಲಾಷಪೂರಣಸುಖಂ ನಿರ್ವರ್ತಯತ್ಯೇವ ಮೇ ॥

೧೬

ಕದಾ ಮುಖಂ ವರತನು ಕಾರಣಾದೃತೇ
ತವಾಗತಂ ಕ್ಷಣಮಪಿ ಕೋಪಪಾತ್ರತಾಂ ।
ಅಪರ್ವಣಿ ಗ್ರಹಕಲುಷೇಂದುಮಂಡಲಾ
ವಿಭಾವರೀ ಕಥಯ ಕಥಂ ಭವಿಷ್ಯತಿ ॥

೧೭

ನಾರ್ಹತಿ ಕೃತಾಪರಾಧೋಽಪ್ಯುತ್ಸವದಿವಸೇಷು ಪರಿಜನೋ ದಂಡಂ
ಇತಿ ಮೋಚಿತೇ ಮಯ್ಯೈತೇ ಪ್ರಣಿಪತಿತುಂ ಮಾಮುಪಗತೇ ಚ ॥

V

೧

ಪರಭೃತಕಲವ್ಯಾಹಾರೇಷು ತ್ವಮಾತ್ತರತಿರ್ಮಧುಂ
ನಯಸಿ ವಿದಿಶಾತೀರೋದ್ಯಾನೇಷ್ವನಂಗ ಇವಾಂಗವಾನ್ ।

ವಿಜಯಕರಿಣಾಮಾಲಾನಾಂಗೈರುಪೋಢಬಲಸ್ಯ ತೇ
ವರದ ವರದಾರೋಧೋವೃಕ್ಷೈಃ ಸಹಾವನತೋ ರಿಪುಃ |

೨

ವಿರಚಿತಪದಂ ವೀರಪ್ರೀತ್ಯಾ ಸುರೋಪಮಸೂರಿಭಿ-
ಶ್ಚರಿತಮುಭಯೋರ್ಮಧ್ಯೇಕೃತ್ಯ ಸ್ಥಿತಂ ಕ್ರಥಕೈಶಿಕಾನ್ |
ತವ ಹೃತವತೋ ದಂಡಾನೀಕೈರ್ವಿದರ್ಭಪತೇಃ ಶ್ರಿಯಂ
ಪರಿಘಗುರುಭಿರ್ದೋರ್ಭಿಃ ಶೌರೇಃ ಪ್ರಸಹ್ಯ ಚ ರುಕ್ಮಿಣೀಂ ||

೩

ಕಾಂತಾಂ ವಿಚಿಂತ್ಯ ಸುಲಭೇತರಸಂಪ್ರಯೋಗಾಂ
ಶ್ರುತ್ವಾ ವಿದರ್ಭಪತಿಮಾನಮಿತಂ ಬಲೈಶ್ಚ |
ಧಾರಾಭಿರಾತಪ ಇವಾಭಿಹತಂ ಸರೋಜಂ
ದುಃಖಾಯತೇ ಚ ಹೃದಯಂ ಸುಖಮಶ್ನುತೇ ಚ ||

೪

ಅಗ್ರೇ ವಿಕೀರ್ಣಕುರಬಕಫಲಜಾಲವಿಭಿದ್ಯಮಾನಸಹಕಾರಂ |
ಪರಿಣಾಮಾಭಿಮುಖಮೃತೋರುತ್ಸುಕಯತಿ ಯೌವನಂ ಚೇತಃ ||

೫

ಸರ್ವಾಶೋಕತರೂಣಾಂ ಪ್ರಥಮಂ ಸೂಚಿತವಸಂತವಿಭವಾನಾಂ |
ನಿರ್ವೃತ್ತದೋಹದೇಽಸ್ಮಿನ್ ಸಂಕ್ರಾಂತಾನೀವ ಕುಸುಮಾನಿ ||

೬

ಮಾಮಿಯಮಭ್ಯುತ್ತಿಷ್ಠತಿ ದೇವೀ ವಿನಯಾದುಪಸ್ಥಿತಾ ಪ್ರಿಯಯಾ |
ವಿಸ್ರಸ್ತಹಸ್ತಕಮಲಯಾ ನರೇಂದ್ರಲಕ್ಷ್ಮ್ಯಾ ವಸುಮತೀವ ||

೭

ಅನತಿಲಂಬಿದುಕೂಲನಿವಾಸಿನೀ
ಲಘುಭಿರಾಭರಣೈಃ ಪ್ರತಿಭಾತಿ ಮೇ |
ಉಡುಗಣೈರುದಯೋನ್ಮುಖಚಂದ್ರಿಕಾ
ಗತಹಿಮೈರಿವ ಚೈತ್ರವಿಭಾವರೀ ||

೮

ನಾಯಂ ದೇವ್ಯಾ ಭಾಜನತ್ವಂ ನ ನೇಯಃ
ಸತ್ಕಾರಣಾಮೀದೃಶಾನಾಮಶೋಕಃ ।
ಯಃ ಸಾವಜ್ಞೋ ಮಾಧವಶ್ರೀನಿಯೋಗೇ
ಪುಷ್ಪೈಃ ಶಂಸತ್ಯಾದರಂ ತ್ವತ್ಪ್ರಯತ್ನೇ ॥

೯

ಅಹಂ ರಥಾಂಗನಾಮೇವ ಪ್ರಿಯಾ ಸಹಚರೀವ ಮೇ ।
ಅನನುಜ್ಞಾತಸಂಪರ್ಕಾ ಧಾರಿಣೀ ರಜನೀವ ನೌ ॥

೧೦

ತೂಣೀರಪಟ್ಟಪರಿಣದ್ಧ ಭುಜಾಂತರಾಲ-
ಮಾಪಾರ್ಷ್ಣಿಲಂಬಿ ಶಿಖಿಬರ್ಹಕಲಾಪಧಾರಿ ।
ಕೋದಂಡಪಾಣಿ ನಿನದತ್ ಪ್ರತಿರೋಧಕಾನಾ-
ಮಾಪಾತದುಷ್ಪ್ರಸಹಮಾವಿರಭೂದನೀಕಂ ॥

೧೧

ಇಮಾಂ ಪರೀಪ್ಸುರ್ದುರ್ಜಾತೇಃ ಪರಾಭಿಭವಕಾತರಾಂ ।
ಭರ್ತೃಪ್ರಿಯಃ ಪ್ರಿಯೈರ್ಭರ್ತೃರಾನೃಣ್ಯಮಸುಭಿರ್ಗತಃ ॥

೧೨

ಪ್ರೇಷ್ಯಭಾವೇನ ನಾಮೇಯಂ ದೇವೀ ಶಬ್ದಕ್ಷಮಾ ಸತೀ ।
ಸ್ನಾನೀಯವಸ್ತ್ರಕ್ರಿಯಯಾ ಪತ್ರೋರ್ಣಂ ವೋಪಯುಜ್ಯತೇ ॥

೧೩

ತೌ ಪೃಥಗ್ವರದಾಕೂಲೇ ಶಿಷ್ಟಾವುತ್ತರದಕ್ಷಿಣೇ ।
ನಕ್ತಂದಿವಂ ವಿಭಜ್ಯೋಭೌ ಶೀತೋಷ್ಣಕಿರಣಾವಿವ ॥

೧೪

ದ್ವಿಧಾ ವಿಭಕ್ತಾಂ ಶ್ರಿಯಮುದ್ವಹನ್ತೌ
ಧುರಂ ರಥಾಶ್ವಾವಿವ ಸಂಗ್ರಹೀತುಃ ।

ತೌ ಸ್ಥಾಸ್ಯತಸ್ತೇ ನೃಪತೀ ನಿದೇಶೇ
ಪರಸ್ಪರಾವಗ್ರಹನಿರ್ವಿಕಾರೌ ||

೧೫

ತತಃ ಪರಾನ್ ಪರಾಜಿತ್ಯ ವಸುಮಿತ್ರೇಣ ಧನ್ವಿನಾ |
ಪ್ರಸಹ್ಯ ಹ್ರಿಯಮಾಣೋ ಮೇ ವಾಜಿರಾಜೋ ನಿವರ್ತಿತಃ ||

೧೬

ಭರ್ತ್ರಾಸಿ ವೀರಪತ್ನೀನಾಂ ಶ್ಲಾಘ್ಯಾಯಾಂ ಸ್ಥಾಪಿತಾ ಧುರಿ |
ವೀರಸೂರಿತಿ ಶಬ್ದೋಽಯಂ ತನಯಾತ್ತ್ವಾಮುಪಸ್ಥಿತಃ ||

೧೭

ನೈತಾವತಾ ವೀರವಿಜೃಂಭಿತೇನ
ಚಿತ್ತಸ್ಯ ನೋ ವಿಸ್ಮಯಮಾದಧಾತಿ |
ಯಸ್ಯಾಪ್ರಧೃಷ್ಯಃ ಪ್ರಭವಸ್ತ್ವಮುಚ್ಚೈ-
ರ್ವಹ್ನೇರಪಾಂ ದಗ್ಧುರಿವೋರುಜನ್ಮಾ ||

೧೮

ಅಪ್ಯಾಕರಸಮುತ್ಪನ್ನಾ ಮಣಿಜಾತಿರಸಂಸ್ಕೃತಾ |
ಜಾತರೂಪೇಣ ಕಲ್ಯಾಣಿ ನ ಹಿ ಸಂಯೋಗಮರ್ಹತಿ ||

೧೯

ಪ್ರತಿಪಕ್ಷೇಣಾಪಿ ಪತಿಂ ಸೇವನ್ತೇ ಭರ್ತೃವತ್ಸಲಾಃ ಸಾಧ್ವ್ಯಃ |
ಅನ್ಯಸರಿತಾಂ ಶತಾನಿ ಹಿ ಸಮುದ್ರಗಾಃ ಪ್ರಾಪಯಂತ್ಯಬ್ಧಿಂ ||

೨೦

ತ್ವಂ ಮೇ ಪ್ರಸಾದಸುಮುಖೀ ಭವ ಚಂಡಿ ನಿತ್ಯ-
ಮೇತಾವದೇವ ಮೃಗಯೇ ಪ್ರತಿಪಕ್ಷಹೇತೋಃ |
ಆಶಾಸ್ಯಮೀತಿವಿಗಮಪ್ರಭೃತಿ ಪ್ರಜಾನಾಂ
ಸಂಪತ್ಸ್ಯತೇ ನ ಖಲು ಗೋಪ್ತರಿ ನಾಗ್ನಿಮಿತ್ರೇ ||

---

## ಕೆಲವು ಮುಖ್ಯ ವಿಷಯಗಳ ಟಿಪ್ಪಣಿ

ನಾಂದಿ—ದೇವತಾಸ್ತೋತ್ರರೂಪವಾಗಿಯೂ ರಾಜ ಪ್ರಜೆ ಮುಂತಾದವರಿಗೆ ಆಶೀರ್ವಾದರೂಪವಾಗಿಯೂ ಇರತಕ್ಕ ವಚನ.

ಸೂತ್ರಧಾರ—ನಾಟಕದ ಅಭಿನಯದ ಸೂತ್ರಗಳನ್ನು ಹಿಡಿದವನು. ರಂಗಸ್ಥಳದ ಮುಖ್ಯ ನಿರ್ದೇಶಕ. ರಂಗದೇವತೆಯನ್ನು ಪೂಜೆಮಾಡಿ ನಾಂದೀ ಪದ್ಯಗಳನ್ನು ಈತ ಪಠಿಸುತ್ತಾನೆ.

ಮಾರಿಷ—ಸೂತ್ರಧಾರನು ತನಗೆ ಸಹಾಯಕನಾಗಿ ನಿಂತ ಪಾರಿಪಾರ್ಶ್ವಕನನ್ನು 'ಮಾರಿಷ' ಎಂದು ಸಂಬೋಧಿಸುವನು. ಇದಕ್ಕೆ ಪ್ರತಿಯಾಗಿ ಪಾರಿಪಾರ್ಶ್ವಕನು ಸೂತ್ರಧಾರನನ್ನು 'ಭಾವ' ಎಂದು ಕರೆಯುವನು.

ಪಾರಿಪಾರ್ಶ್ವಕ—ಸೂತ್ರಧಾರನ ಮಗ್ಗುಲಲ್ಲಿಯೇ ಇರುವುದರಿಂದ ಈ ಸಹಾಯಕನಿಗೆ ಈ ಹೆಸರು ಬಂದಿದೆ. ಸಭಿಕರಿಗೆ ಕಥಾವಸ್ತುವನ್ನು ಪರಿಚಯ ಮಾಡಿಕೊಡುವುದರಲ್ಲಿ ಈತನು ಸೂತ್ರಧಾರನಿಗೆ ನೆರವಾಗುತ್ತಾನೆ.

ಪ್ರಸ್ತಾವನೆ—ಸೂತ್ರಧಾರನು ನಟಿ, ವಿದೂಷಕ, ಪಾರಿಪಾರ್ಶ್ವಕ ಮುಂತಾದವರಲ್ಲಿ ಒಬ್ಬರು ಅಥವಾ ಅನೇಕರೊಡನೆ ಮಾತನಾಡುತ್ತಾ 'ಭಾರತೀವೃತ್ತಿ'ಯಿಂದ ಪ್ರಸಕ್ತವಾದ ವಿಷಯಕ್ಕೆ ಬಂದು ಋತು ವರ್ಣನೆ, ಕವಿಕಾವ್ಯ ವಿಚಾರ, ವಸ್ತುವಿನ ಅಥವಾ ಪಾತ್ರಗಳ ಸೂಚನೆ ಮುಂತಾದವುಗಳನ್ನು ಮಾಡಿ ಹೊರಟುಹೋಗುವನು. ಅನಂತರ ಕಥೆಯು ಆರಂಭವಾಗುವುದು. ಇಲ್ಲಿಯವರೆಗಿನ ಕಾರ್ಯಕ್ಕೆ ಪ್ರಸ್ತಾವನೆ ಎಂದು ಹೆಸರು.

ವಿದೂಷಕ—ಪ್ರಣಯವಿಷಯಗಳಲ್ಲಿ ನಾಯಕನಿಗೆ ವಿಟಚೇಟರಂತೆ ಸಹಾಯಕನಾಗಿ ಒದಗುವ ಮಿತ್ರ. ತನ್ನ ವೇಷಭೂಷಗಳಿಂದಲೂ ನಗೆ ಮಾತುಗಳಿಂದಲೂ ಹಾಸ್ಯವನ್ನು ಉಕ್ಕೇರಿಸುವ ವ್ಯಕ್ತಿ. ರಾಜನಿಗೆ ನರ್ಮ ಸಚಿವನಾಗಿ ಕೆಲಸಮಾಡತಕ್ಕ ಪರಿಹಾಸಶೀಲನೂ ಉಪಾಯ ಚತುರನೂ ಆದ ಬ್ರಾಹ್ಮಣ.

ಚಲಿತ ನಾಟ್ಯ—ನಾಟ್ಯ ವಿಶೇಷ. ಬಗೆಬಗೆಯ ಬೇರೆಬೇರೆ ಭಾವ

ಗಳನ್ನು ಅಭಿನಯದ ಮೂಲಕ ಸ್ಪಷ್ಟವಾಗಿ ತೋರಿಸುವ ನಾಟ್ಯ. ಇದನ್ನು ನಾಟ್ಯವಾಡಿ ತೋರುವುದು ಕಷ್ಟಸಾಧ್ಯ.

ಭಾವಿಕ—ಮನಸ್ಸಿನ ಸುಖದುಃಖಾದಿ ಭಾವಗಳನ್ನು ಆಂಗಿಕವಾದ ಅಭಿನಯದ ಮೂಲಕ ಸ್ಪಷ್ಟವಾಗಿ ತೋರಿಸುವ ನಾಟ್ಯ ವಿಶೇಷ.

ವರ್ಣಾವರ—ಕ್ಷತ್ರಿಯ ತಂದೆಗೆ ವೈಶ್ಯ ಜನನಿಯಲ್ಲಿ ಜನಿಸಿದವನು.

ಪಂಚಾಂಗಿಕಾಭಿನಯ—ಮನಸ್ಸು, ಕಣ್ಣು, ಹುಬ್ಬು ಕೈ ಮತ್ತು ಕಾಲುಗಳಿಂದ ಭಾವಗಳನ್ನು ಪ್ರಕಟಪಡಿಸುವ ಅಭಿನಯ.

ಮಿಶ್ರವಿಷ್ಕಂಭಕ—ನಡೆದು ಹೋದ ಮತ್ತು ಮುಂದೆ ನಡೆಯುವ ಕಥಾಂಶಗಳನ್ನು ಮಧ್ಯಮ ಪಾತ್ರಗಳೂ ನೀಚಪಾತ್ರಗಳೂ ಸೇರಿ ಸೂಚಿಸಿದರೆ ಅದಕ್ಕೆ ಮಿಶ್ರವಿಷ್ಕಂಭಕವೆಂದು ಹೆಸರು.

ಕಂಚುಕಿ—ಅಂತಃಪುರದ ಸೇವಕರ ಮುಖ್ಯಸ್ಥ. ಉದ್ದನೆಯ ಅಂಗಿ (ಕಂಚುಕ) ಯನ್ನು ತೊಡತಕ್ಕವನು. ಸತ್ಯನಿಷ್ಠನೂ ವಿಶ್ವಾಸಪರನೂ ಕಾರ್ಯದಕ್ಷನೂ ಆದ ವೃದ್ಧ ಬ್ರಾಹ್ಮಣ.

ಪೀಠಮರ್ದಿಕೆ—ನಾಯಕನಿಗಿಂತ ಗುಣದಲ್ಲಿ ಸ್ವಲ್ಪ ಕಡಿಮೆಯಾದವಳು. ಈಕೆ ರಾಜಕಾರ್ಯಗಳಲ್ಲಿ ನಾಯಕನಿಗೆ ಸಹಾಯಮಾಡಬಲ್ಲವಳು. ಇಲ್ಲಿ ಪ್ರಣಯ ವಿಷಯಗಳಲ್ಲಿ ನೆರವು ನೀಡುತ್ತಾಳೆ.

ಪರಿವ್ರಾಜಿಕೆ—ಸಂನ್ಯಾಸಿನಿ, ಕಾವಿ ಬಟ್ಟೆಯನ್ನು ಧರಿಸಿದವಳು.

ಮಧ್ಯಲಯ—ದ್ರುತ, ಮಧ್ಯ, ವಿಲಂಬಿತ ಎಂದು ಲಯಗಳಲ್ಲಿ ಮೂರು ಬಗೆ. ಶೃಂಗಾರ ಮತ್ತು ಹಾಸ್ಯರಸಗಳಲ್ಲಿ ಮಧ್ಯಲಯವನ್ನು ಅನುಸರಿಸಬೇಕೆಂದು ಭರತನು ಹೇಳುತ್ತಾನೆ.

ವೈತಾಳಿಕ—ಕಾಲಕಾಲಕ್ಕೆ ರಾಜನು ಮಾಡಬೇಕಾದ ಕೆಲಸಗಳನ್ನು ನೆನಪಿಗೆ ತರುವವನು. ವಿವಿಧ ತಾಳಗಳಲ್ಲಿ ಹಾಡುಗಳನ್ನು ಹಾಡಿ ಅರಸನನ್ನು ಎಚ್ಚರಗೊಳಿಸುವವನು.

ಪ್ರವೇಶಕ—ಹಿಂದೆ ನಡೆದ ಮತ್ತೆ ಮುಂದೆ ನಡೆಯುವ ಕಥಾಂಶಗಳನ್ನು ಬರಿಯ ನೀಚ ಪಾತ್ರಗಳಿಂದಲೇ ಸೂಚಿಸತಕ್ಕದ್ದು. ಇದು ಎರಡು ಅಂಕಗಳ ಮಧ್ಯದಲ್ಲಿ ಮಾತ್ರ ಬರುತ್ತದೆ.

ಉದಕುಂಭವಿಧಾನ—ಗಡಿಗೆಯಲ್ಲಿ ನೀರು ತುಂಬಿ ನಾಗಮುದ್ರೆಯಿರುವ ಯಾವುದಾದರೂ ಆಭರಣವನ್ನು ಅದರಲ್ಲಿ ಹಾಕಿ ಮಂತ್ರಿಸಿ ಹಾಗೆ ಮಂತ್ರಿಸಿದ ನೀರನ್ನು ಹಾವು ಕಡಿದ ಸ್ಥಳಕ್ಕೆ ಪ್ರೋಕ್ಷಿಸುವುದುಂಟು. ಅಥವಾ ಹಾವು ಕಡಿದವನಿಗೆ ಕುಡಿಸುವುದುಂಟು. ಈ ಚಿಕಿತ್ಸೆಗೆ ಉದಕುಂಭ ವಿಧಾನ ಎಂದು ಹೆಸರು.

ಶಠ—ಒಬ್ಬಳನ್ನು ಗುಟ್ಟಾಗಿ ಪ್ರೀತಿಸುತ್ತಿದ್ದರೂ ಏನೂ ತಿಳಿಯದವನ ಹಾಗೆ ನಟಿಸುವ ವ್ಯಕ್ತಿ.

ಭರತವಾಕ್ಯ—ನಾಟಕದ ಕೊನೆಯಲ್ಲಿ ನಟನು ಹೇಳುವ ಮಾತು. ನಾಟ್ಯಶಾಸ್ತ್ರವನ್ನು ರಚಿಸಿದ ಭರತಮುನಿಯ ಮೇಲಣ ಗೌರವದಿಂದ ನಾಟಕದ ಕೊನೆಯ ಮಾತನ್ನು ಭರತವಾಕ್ಯ ಎಂದು ಕರೆಯುತ್ತಾರೆ. ಇದರಲ್ಲಿ ಸಾಮಾನ್ಯವಾಗಿ ಲೋಕಶಾಂತಿ, ಜನರ ಕಲ್ಯಾಣ ರಾಜಾಶೀರ್ವಾದ ಇರುತ್ತದೆ.

*   *   *

## ಉಪಕಾರ ಸ್ಮರಣೆ

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪಠ್ಯಪುಸ್ತಕ ಸಮಿತಿಯವರು ಕನ್ನಡ ಮಾಳವಿಕಾಗ್ನಿಮಿತ್ರ ನಾಟಕವನ್ನು ಈ ವರ್ಷದ ಪ್ರಿ-ಯೂನಿವರ್ಸಿಟಿ ತರಗತಿಗೆ ಪಠ್ಯಗ್ರಂಥವನ್ನಾಗಿ ಗೊತ್ತುಪಡಿಸಿ ಉಪಕಾರಮಾಡಿದ್ದಾರೆ.

ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳವರು ತಮ್ಮ 'ಸಂಸ್ಕೃತ ನಾಟಕ' ದಿಂದ ಈ ಕೃತಿಗೆ ಸಂಬಂಧಪಟ್ಟ ವಿಷಯವನ್ನು ಅಳವಡಿಸಿಕೊಳ್ಳಲು ಅನುಮತಿಕೊಟ್ಟಿರುವುದಕ್ಕಾಗಿ ನಾನು ಶ್ರೀಯುತರಿಗೆ ತುಂಬಾ ಕೃತಜ್ಞನಾಗಿದ್ದೇನೆ.

ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸಿನ ಮಾಲೀಕರು ಮುದ್ರಣದ ಕೆಲಸವನ್ನು ಸಕಾಲದಲ್ಲಿ ಸಮರ್ಪಕವಾಗಿ ಮಾಡಿಕೊಟ್ಟಿರುವುದಕ್ಕಾಗಿ ಅವರಿಗೆ ನನ್ನ ವಂದನೆಗಳು.

ಶಾರದಾ ಮಂದಿರದ ಒಡೆಯರೂ ನನ್ನ ಆಪ್ತರೂ ಆದ ಪ್ರೊ. ಎಚ್. ಎಂ. ಶಂಕರನಾರಾಯಣ ರಾಯರು ಪ್ರಕಾಶನಕಾರ್ಯದಲ್ಲಿ ವಹಿಸಿದ ಆಸ್ಥೆಗಾಗಿ ಅವರಿಗೆ ನಾನು ಋಣಿ.

---